# ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳು

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ
ನಿಬಂಧ

ನಿಬಂಧಕಾರರು
ಎಸ್.ಸುಧಾಕರ
ಕನ್ನಡ ಎಂ.ಫಿಲ್.ಅಭ್ಯರ್ಥಿ
ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ,
ಕರ್ನಾಟಕ ಸಂಘ(ರಿ), ಮಂಡ್ಯ

ಮಾರ್ಗದರ್ಶಕರು
ಡಾ.ಬೋರೇಗೌಡ ಚಿಕ್ಕಮರಳಿ
ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು
ವಿಜಯ ಪ್ರಥಮ ದರ್ಜೆ ಕಾಲೇಜು
ಪಾಂಡವಪುರ-೫೭೧೪೩೪





ಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ,
ಕರ್ನಾಟಕ ಸಂಘ (ರಿ), ಮಂಡ್ಯ
ನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ)
೨೦೦೭-೨೦೦೮

# ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳು

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಪದವಿಗಾಗಿ ಸಲ್ಲಿಸಿದ
ನಿಬಂಧ

ನಿಬಂಧಕಾರರು

**ಎಸ್.ಸುಧಾಕರ**

ಕನ್ನಡ ಎಂ.ಫಿಲ್.ಅಭ್ಯರ್ಥಿ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ(ರಿ), ಮಂಡ್ಯ

ಮಾರ್ಗದರ್ಶಕರು

**ಡಾ.ಬೋರೇಗೌಡ ಚಿಕ್ಕಮರಳಿ**

ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು
ವಿಜಯ ಪ್ರಥಮ ದರ್ಜೆ ಕಾಲೇಜು
ಪಾಂಡವಪುರ-೫೭೧೪೩೪






ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ
(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)
೨೦೦೭-೨೦೦೮

# ಮಾರ್ಗದರ್ಶಕರ ಘೋಷಣಾ ಪತ್ರ

ಶ್ರೀ ಎಸ್.ಸುಧಾಕರ ಅವರು **'ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳು'** ಎಂಬ ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್.ಪದವಿಗಾಗಿ ಸಿದ್ಧಪಡಿಸಿದ ಸ್ವತಂತ್ರ ನಿಬಂಧ ಇದಾಗಿದೆ. ಇದನ್ನು ಮೌಲ್ಯ ಮಾಪನಕ್ಕಾಗಿ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ನಾನು ಸಮ್ಮತಿಸಿದ್ದೇನೆಂದು ಈ ಮೂಲಕ ಪ್ರಮಾಣೀಕರಿಸುತ್ತಿದ್ದೇನೆ.

ದಿನಾಂಕ : ೧೦.೦೯.೦೮

ಡಾ.ಬೋರೇಗೌಡ ಚಿಕ್ಕಮರಳಿ
ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು
ವಿಜಯ ಪ್ರಥಮ ದರ್ಜೆ ಕಾಲೇಜು
ಪಾಂಡವಪುರ-೫೭೧೪೩೪

ಡಾ|| ಬೋರೇಗೌಡ
ಹಿರಿಯ ಶ್ರೇಣಿ ಉಪನ್ಯಾಸಕರು
ಕನ್ನಡ ವಿಭಾಗ,
ವಿಜಯ ಪ್ರಥಮ ದರ್ಜೆ ಕಾಲೇಜು
ಪಾಂಡವಪುರ - ೫೭೧೪೩೪

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ನೇ ಸಾಲಿಗೆ ಎಸ್.ಸುಧಾಕರ ಆದ ನಾನು ಎಂ.ಫಿಲ್.ಅಭ್ಯರ್ಥಿಯಾಗಿ ಪ್ರವೇಶ ಪಡೆದಿರುತ್ತೇನೆ. ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **'ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳು'** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ.ಬೋರೇಗೌಡ ಚಿಕ್ಕಮರಳಿ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತಿದ್ದೇನೆ.

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್.ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ : ೧೦.೦೯.೦೮
ಸ್ಥಳ : ಮಂಡ್ಯ

ಎಸ್.ಸುಧಾಕರ
ಕನ್ನಡ ಎಂ.ಫಿಲ್.ವಿದ್ಯಾರ್ಥಿ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ, ಮಂಡ್ಯ

# ಪರಿವಿಡಿ

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಮಹತ್ವ

ಸಾಹಿತ್ಯಸುಧೆಯು ನಿರಂತರವಾಗಿ ಹರಿಯುವ ಗಂಗಾಜಲದಂತೆ ಜೀವಂತಿಕೆಯುಳ್ಳದ್ದು. ಚಲನಶೀಲವಾಗಿ ಪ್ರವಹಿಸುತ್ತಾ ಬಂದಿರುವ ಸಾಹಿತ್ಯವು ಸಾಹಿತಿಯೊಬ್ಬನ ಅನುಭವದ ಮೂಸೆಯಿಂದ ಮೂಡಿ ಬರುತ್ತದೆ. ಅದು ಸಮಾಜದ ಓರೆಕೋರೆಗಳನ್ನು ಸರಿಪಡಿಸುವುದರೊಡನೆ ಸಮಾಜವನ್ನು ಬೆಳಗುತ್ತಲೇ ತಾನೂ ಬೆಳೆಯುತ್ತದೆ. ಸಾಹಿತಿಯು "ಪ್ರಾಚೀನ ಸತ್ವದ ಮೇಲೆ ನಿಂತು ಅರ್ವಾಚೀನವನ್ನು ಸೃಜಿಸುತ್ತಾ ಭವಿಷ್ಯತ್ತಿನ ನೂತನ ಆಗಮಿಕದತ್ತ ಮುಂದುವರಿಯಬೇಕು"[1] ಎಂಬ ಕುವೆಂಪು ಅವರ ಮಾತು ಅತ್ಯಂತ ಮೌಲಿಕವಾದುದು. ಸೃಜನಶೀಲ ಬರಹಗಾರನು ತನ್ನ ಸುತ್ತಲಿನ ಜಗತ್ತನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಲೇ ತಾನು ಕಂಡುಂಡ ಅನುಭವಗಳನ್ನು ಆಕರಗಳನ್ನಾಗಿ ಮಾಡಿಕೊಂಡು ತನ್ನ ಭಾವನೆಗಳನ್ನು ಭಾಷೆಯ ಮೂಲಕ ಅಭಿವ್ಯಕ್ತಿಪಡಿಸುವನು. ಸಾಹಿತಿಯು ಕೇವಲ ನೀತಿಬೋಧನೆಗಾಗಿ ಸಾಹಿತ್ಯ ರಚಿಸುವುದಿಲ್ಲ. ಸಮಾಜ ಹಾಗೂ ಸಂಸ್ಕೃತಿಯ ಪ್ರತಿಬಿಂಬವೂ ಗತಿಬಿಂಬವೂ ಆಗಿರುವ ಸಾಹಿತ್ಯವನ್ನು ರಚಿಸುವಾಗ ಅವನು ಸವೆಸುವ ಹಾದಿಯೇನೂ ಸುಗಮವಾಗಿರುವುದಿಲ್ಲ. ಕಲಾತ್ಮಕ ಸಾಹಿತ್ಯವನ್ನು ಸೃಜಿಸುವ ಬರಹಗಾರನು ಒಬ್ಬ ಕಲಾವಿದನಾಗಿಯೂ,ತಾನು ಪ್ರತಿನಿಧಿಸುವ ಸಮಾಜದ ವಕ್ತಾರನಾಗಿಯೂ ಕಾರ್ಯನಿರ್ವಹಿಸಬೇಕಾಗುತ್ತದೆ. "ಸಾಹಿತ್ಯ ಹಾಗೂ ಸಂಸ್ಕೃತಿಯು ತನ್ನ ಹೆಜ್ಜೆಗುರುತುಗಳನ್ನು ಉಳಿಸುತ್ತಾ ಹೋಗಿರುವುದು ತನ್ನ ಕಲಾವಿದರ ನಿಲುವು ಹಾಗೂ ನಿರ್ಮಿತಿಗಳಲ್ಲಿಯೇ ಎನ್ನುವುದು ಸೂರ್ಯಸ್ಪಷ್ಟ"[2]

"ಸಾಹಿತ್ಯವೆಂದರೆ ಸರಸವಾದ ಗ್ರಂಥ. ರಸವುಳ್ಳದ್ದು ಸರಸ, ರಸವೆಂದರೆ ಇನ್ನೂ ಬೇಕು, ಇನ್ನೂ ಬೇಕು, ಎಂದೆನಿಸುವಂಥ ರುಚಿಯುಳ್ಳ ದ್ರವ್ಯ. ಸರಸವಾಗಿ ಬಂದ ವಾಕ್ಯಕ್ಕೆ ಕಲ್ಲಿನಂತಿರುವ ಮನಸ್ಸನ್ನು ಕರಗಿಸುವ ಶಕ್ತಿಯಿರುತ್ತದೆ...... ಸಾಹಿತ್ಯವು ದುಃಖವನ್ನು ಮರೆಯಿಸಿ ನಮ್ಮನ್ನು ನಗಿಸಲೂ ಬಲ್ಲದು, ಅಳು-ನಗುಗಳೆರಡಕ್ಕಿಂತ ಮೇಲ್ಮಟ್ಟಕ್ಕೆ ನಮ್ಮನ್ನೊಯ್ದು ಸಮಾಧಾನ ಪಡಿಸಲೂ ಬಲ್ಲದು. ಮನಸ್ಸನ್ನು ಪರಿಪಕ್ವಗೊಳಿಸಿ ಆತ್ಮವನ್ನು ದೃಢಪಡಿಸುವ ಉದಾತ್ತ ದರ್ಶನವನ್ನು ಒಳಗೊಂಡಿರುವುದೇ ಶ್ರೇಷ್ಠ ಸಾಹಿತ್ಯ"[3] ಎಂಬ ಡಿ.ವಿ.ಜಿ.ಯವರ ದಾರ್ಶನಿಕ ನುಡಿಗಳು ಸಾಹಿತ್ಯದಲ್ಲಿ ಅಡಕವಾಗಿರುವ ಜೀವನದರ್ಶನವನ್ನು ಅನಾವರಣಗೊಳಿಸುತ್ತವೆ. ಸಾಹಿತ್ಯದ ಮಹತ್ವವನ್ನು ಈ ಮಾತುಗಳು ಮೌಲ್ಯೀಕರಣಗೊಳಿಸುತ್ತವೆ.

ಕನ್ನಡ ಸಾಹಿತ್ಯವು ಕಾಲಘಟ್ಟದ ಏಳು-ಬೀಳುಗಳ ತಾಕಲಾಟದಲ್ಲಿ ಮಿಂದು ಮೇಲೆದ್ದಿದೆ. ಕನ್ನಡ ಸಾಹಿತ್ಯವನ್ನು ಅದರ ಕಾಲಘಟ್ಟವನ್ನಾಧರಿಸಿ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂದು ಸಾಹಿತ್ಯ ಚರಿತಕಾರರು ವಿಭಾಗಿಸಿದ್ದಾರೆ. ಹಳಗನ್ನಡ ಸಾಹಿತ್ಯವು ಧರ್ಮ ಮತ್ತು ರಾಜಾಶ್ರಯದ ನೆರಳಿನಲ್ಲಿಯೇ ತನ್ನ ನೆಲೆಯನ್ನು ಕಂಡುಕೊಂಡಿದೆ. ಈ ಅವಧಿಯಲ್ಲಿ ಕವಿಯ ಕಲೆಗೆ ಚ್ಯುತಿ ಬಂದರೂ ಧರ್ಮ ಹಾಗೂ ರಾಜಪ್ರಭುತ್ವಕ್ಕೆ ಧಕ್ಕೆ ಬರುವಂತಿರಲಿಲ್ಲ. ತಾವು ನಂಬಿದ್ದ ಧರ್ಮ ಹಾಗೂ ಆಶ್ರಯಿಸಿದ್ದ ಪ್ರಭುತ್ವ ಎರಡನ್ನೂ ಏಕಕಾಲದಲ್ಲಿ ಸಂಭಾಳಿಸಬೇಕಾದ ಸ್ಥಿತಿ ಪ್ರಾಚೀನ ಕವಿಗಳಿಗಿದ್ದಿತು. ಕನ್ನಡ ಸಾಹಿತ್ಯಸೌಧಕ್ಕೆ ಭದ್ರತಳಹದಿಯನ್ನು ನಿರ್ಮಿಸಿದ ಕೀರ್ತಿ ಜೈನಧರ್ಮ ಮತ್ತು ಅದರ ಅನುಯಾಯಿಗಳಿಗೆ ಸಲ್ಲಬೇಕು. ನಡುಗನ್ನಡ ಸಾಹಿತ್ಯದ ಅವಧಿಯಲ್ಲಿ ಕನ್ನಡ ಸಾಹಿತ್ಯಸೌಧ ನಿರ್ಮಾಣಕ್ಕೆ ಪ್ರಾಮಾಣಿಕ ಪ್ರಯತ್ನ ನಡೆಯಿತು.

ವಚನಕಾರರು ವಿಶಿಷ್ಟವಾದ ಸ್ವತಂತ್ರ ಹೆದ್ದಾರಿಯನ್ನೂ ನಿರ್ಮಿಸಿದರು. ಇವರ ತರುವಾಯ ಬಂದ ವೀರಶೈವಕವಿಗಳು, ಭಾಗವತ ಕವಿಗಳು ರಾಜಾಶ್ರಯವನ್ನೂ ತ್ಯಜಿಸಿದರೂ ತಾವು ನಂಬಿದ್ದ ದೈವವನ್ನು ತ್ಯಜಿಸಲು ಸಿದ್ಧರಿರಲಿಲ್ಲ. ಕವಿ ದೇವರು, ತಾವು ನೆಪಮಾತ್ರ ಎಂದು ಭಾವಿಸಿ ದೈವತ್ವದ ಅಮಲಿನಲ್ಲಿ ಕಾವ್ಯವನ್ನು ರಚಿಸಿದ ಕವಿಗಳೂ ಕೂಡ ತಮ್ಮ ಕೃತಿಗಳು ಕಾವ್ಯ ಧರ್ಮಕ್ಕೆ ಚ್ಯುತಿ ಬಾರದಂತೆ ನೋಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ಸಂಸ್ಕೃತ ಸಾಹಿತ್ಯವು ಕನ್ನಡ ಸಾಹಿತ್ಯ ಪರಂಪರೆಗೆ ಬಹಳಷ್ಟು ನೆರವನ್ನು ಒದಗಿಸಿದೆ. ಪ್ರಾಚೀನ ಕನ್ನಡ ಸಾಹಿತ್ಯದ ಪ್ರತಿಯೊಂದು ಹೆಜ್ಜೆಯೂ ಸಂಸ್ಕೃತದ ನೆರಳಿನಲ್ಲಿಯೇ ಸಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. "ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ ಪೋಷಕ ಗುರು"[೪] ಪ್ರಾಚೀನ ಕನ್ನಡ ಸಾಹಿತ್ಯದ ಪ್ರಕಾರ ಯಾವುದೇ ಆಗಿದ್ದರೂ ಬಹುಪಾಲು ಕವಿಗಳು ಅನುಸರಿಸಿರುವ ವಸ್ತು, ತಂತ್ರ, ಪ್ರಕಾರ, ಮುಂತಾದವುಗಳ ಬೇರು ಮಾತ್ರ ಸಂಸ್ಕೃತ ಸಾಹಿತ್ಯದಲ್ಲಿಯೇ ಗೋಚರಿಸುತ್ತವೆ. "ಕನ್ನಡದ ಬೇರಿಗೆ ಸಂಸ್ಕೃತದ ನೀರು ಬಿದ್ದು ಒಂದು ವಿಶಿಷ್ಟ ಸಂಸ್ಕೃತಿಯ ಮರವು ಮೊಳೆತು ಬೆಳೆಯಿತು."[೫] ಕನ್ನಡ ಸಾಹಿತ್ಯವು ಸಂಸ್ಕೃತದ ನೆರಳಿನಲ್ಲಿಯೇ ಮೊಳಕೆಯೊಡೆದರೂ ಅದು ಹೆಮ್ಮರವಾಗಿ ಬೆಳೆದು ನಿಲ್ಲುವ ವೇಳೆಗೆ ಸ್ವತಂತ್ರ ಅಸ್ತಿತ್ವವನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿದೆ.

### ಉದ್ದೇಶ

'ಸತ್ಯಂ ಶಿವಂ ಸುಂದರಂ' ಎಂಬ ತಾತ್ವಿಕ ನೆಲೆಯಲ್ಲಿ ರೂಪಿತವಾಗುವ ಭಾರತೀಯ ಕಾವ್ಯಜಗತ್ತು ಕಲಾತ್ಮಕವಾದುದು. ಮೌಲಿಕ ಜಗತ್ತಿನ ಚೌಕಟ್ಟೊಂದನ್ನು ನಿರ್ಮಿಸಿಕೊಂಡು ತನ್ನ ವ್ಯಾಪ್ತಿಯೊಳಗೆ ಕವಿಯು ಅನುಭವದ ಅಭಿವ್ಯಕ್ತಿಗಾಗಿ ಹುಡುಕಾಟ ಆರಂಭಿಸುತ್ತಾನೆ. ಸಾಹಿತ್ಯದಲ್ಲಿ ಚಿರಂತನ ಮೌಲ್ಯಗಳೇ ಅಗ್ರಸ್ಥಾನ ಪಡೆಯುತ್ತವೆ. ಮೌಲ್ಯಗಳೂ ಕೂಡ ಯುಗಧರ್ಮಕ್ಕೆ ಅನುಗುಣವಾಗಿ ಬದಲಾವಣೆ ಹೊಂದುತ್ತಲಿರುತ್ತವೆ. ಕನ್ನಡ ಕಾವ್ಯಲೋಕವೂ ಯುಗಧರ್ಮದ ಬದಲಾವಣೆಯಿಂದ ಹೊರತಾಗಿಲ್ಲ. ಒಂದೊಂದು ಕಾಲಘಟ್ಟದಲ್ಲಿ ಒಂದೊಂದು ಮೌಲ್ಯವು ಪ್ರಧಾನವಾಗಿ ಹೊರಹೊಮ್ಮಿರುವುದನ್ನು, ನಿರ್ಮಿತಿಗೊಂಡಿರುವ ಕಾವ್ಯವೇ ದೃಢಪಡಿಸುತ್ತದೆ. ವೀರರಸ, ಭಕ್ತಿರಸ, ಸ್ವಾತಂತ್ರ್ಯ, ಸಮಾನತೆ, ಹಸಿವು, ಪ್ರತಿಭಟನೆ, ಬಂಡಾಯ, ಶೋಷಣೆ, ಮುಂತಾದ ಅಂಶಗಳು ಒಂದೊಂದು ಕಾಲದಲ್ಲಿ ಕಾವ್ಯಕ್ಕೆ ಚಿರಂತನ ಮೌಲ್ಯಗಳಾಗಿ ಸ್ಥಾನ ಪಡೆದಿವೆ. "ಹೊಸ ಕಾಲದ ಹೊಸ ಹೊಸ ವಿಚಾರಗಳಿಗೆ, ಹೊಸ ದೃಷ್ಟಿಕೋನಕ್ಕೆ ಶ್ರೇಷ್ಠ ಕೃತಿಗಳು ಯಾವತ್ತೂ ತಮ್ಮನ್ನು ತಾವು ತೆರೆದುಕೊಳ್ಳುತ್ತವೆ."[೬]

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಾವ್ಯಲೋಕಕ್ಕೆ ವಿಶಿಷ್ಟ ಸ್ಥಾನವಿದ್ದು ಅದರ ಹರಹು ದೊಡ್ಡದಾಗಿದೆ. ಯಾವುದೇ ಕಾಲದಲ್ಲಿಯೂ ಅದು ಸ್ಥಗಿತತೆಯನ್ನು ಕಂಡಿಲ್ಲ. ಕೆಲವು ಸಂದರ್ಭಗಳಲ್ಲಿ ಹೊಳೆಯಾಗಿ ಹರಿಯದಿದ್ದರೂ ಝರಿಯಾಗಿಯಾದರೂ ಹರಿದಿದೆ. ಇದು ನಿರಂತರವಾಗಿ ಹರಿಯಲು ಕಾರಣವಾದ ಶಕ್ತಿಯಾದರೂ ಯಾವುದು? ಇದರ ಮಹತ್ವವೇನು? ಇದಕ್ಕೆ ಸ್ಫೂರ್ತಿಯ ಸೆಲೆ ಯಾವುದು? ಸ್ಫೂರ್ತಿಸರೋವರದಲ್ಲಿ ಮಿಂದು ಮೇಲೆದ್ದವರು ಯಾರು? ಹೇಗೆ ಪ್ರವಹಿಸಿದೆ? ಕಾವ್ಯ-ಪ್ರಕಾರವೊಂದು

ಪ್ರವಹಿಸುವಾಗ ತನ್ನ ನಿರಂತರತೆಯನ್ನು ಹೇಗೆ ಕಾಯ್ದುಕೊಂಡಿದೆ? ಅದರ ಮೂಲ ಪರಿಕರಗಳಾವುವು? ಅದು ಬೀರಿದ ಪ್ರಭಾವ, ಪರಿಣಾಮಗಳೇನು? ಮುಂತಾದ ಕೌತುಕದ ಪ್ರಶ್ನೆಗಳು ಪ್ರತಿಯೊಬ್ಬ ಸಾಹಿತ್ಯಾಸಕ್ತನಲ್ಲಿ ಮೂಡುವುದು ಸಹಜ ಇಂತಹ ಪ್ರಶ್ನೆಗಳೇ ಕಾವ್ಯಾಸಕ್ತನನ್ನು ಹೊಸ ಸಾಹಿತ್ಯ ಲೋಕವೊಂದರ ದರ್ಶನ ಮಾಡಲು ಉತ್ತೇಜನ ನೀಡುತ್ತವೆ.

ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗಿನ ಕಾವ್ಯಗಳನ್ನು ಅಧ್ಯಯನಕ್ಕೊಳಪಡಿಸಿ ನೋಡಿದಾಗ ಪ್ರತೀಕಾವ್ಯದಲ್ಲಿಯೂ ಸಾರ್ವಕಾಲಿಕ ಸತ್ಯಗಳು ಮಿಳಿತಗೊಂಡಿರುವುದು ಗೋಚರಿಸುತ್ತದೆ. ಇಂತಹ ಸತ್ಯಗಳನ್ನೇ ಹಿರಿಯರು ಚಿರಂತನ ಮೌಲ್ಯಗಳೆಂದು ಕರೆದಿದ್ದಾರೆ. ಯುಗ, ಪಂಥ, ಯಾವುದೇ ಆಗಿದ್ದರೂ ಕವಿಯು ತನ್ನ ಕಾಲದ ಸಂವೇದನೆಗಳಿಗೆ ಪ್ರತಿಕ್ರಿಯಿಸುತ್ತಾ ಹೋಗಿರುವುದು ಸರ್ವವಿಧಿತ. ಹಳಗನ್ನಡ, ನಡುಗನ್ನಡ, ಹೊಸಗನ್ನಡ, ಹಾಗೂ ಆಧುನಿಕ ಕನ್ನಡದ ಪಂಥಗಳಾದ ನವೋದಯ, ಪ್ರದತಿಶೀಲ, ನವ್ಯ, ದಲಿತ-ಬಂಡಾಯ, ಇತ್ತೀಚಿನ ಸ್ತ್ರೀ ಸಂವೇದನೆ, ಮುಸ್ಲಿಂ ಸಂವೇದನೆ ಇವುಗಳೆಲ್ಲವೂ ತನ್ನ ಕಾಲದ ಸಂವೇದನೆಗಳಿಗೆ ಪ್ರತಿಕ್ರಿಯಿಸುತ್ತಾ ಹೋಗಿವೆ, ಕವಿಯು ತನ್ನ ಲೇಖನಿಯ ಕತ್ತಿಯಲ್ಲಿ ಓರೆಕೋರೆಗಳನ್ನು ಸರಿಪಡಿಸಲೆತ್ನಿಸಿದ್ದಾನೆ. ಒಂದು ಕಾಲದಲ್ಲಿ ಮೌಲ್ಯವೆಂದು ಪರಿಗಣಿತವಾದದ್ದು ಮತ್ತೊಂದು ಕಾಲದಲ್ಲಿ ತನ್ನ ಪ್ರಖರತೆಯನ್ನು ಕಳೆದುಕೊಳ್ಳುತ್ತದೆ. ಮೌಲ್ಯವೂ ಕೂಡ ಶಿಥಿಲಗೊಳ್ಳುತ್ತದೆ ಎಂಬುದನ್ನು ಸಾಹಿತ್ಯವೇ ಸಮರ್ಥಿಸಿದೆ.

ಕಾವ್ಯವನ್ನು ಅಧ್ಯಯನಕೊಳ್ಳಪಡಿಸಿದಾಗ ಕವಿಯು ನಿರೀಕ್ಷಿಸಿಲ್ಲದ, ಎಷ್ಟೋ ಸಂಗತಿಗಳನ್ನು ಒಬ್ಬ ನಿಜವಾದ ಅಧ್ಯಯನಕಾರ ಹೊರಗೆಡಹುತ್ತಾನೆ. ಕಾವ್ಯದ ಅಧ್ಯಯನ ಮಾಡುವವನ ಯಾವುದೇ ಅಭಿಪ್ರಾಯವೂ ಸಾರ್ವಕಾಲಿಕವಾದುದಲ್ಲ. ನಿರಂತರವಾಗಿ ಅಧ್ಯಯನ ನಡೆದಂತೆ ಹೊಸ ಹೊಸ ಹೊಳಹುಗಳು ಅನಾವರಣಗೊಳ್ಳುತ್ತಿರುತ್ತವೆ. ಕನ್ನಡ ಕಾವ್ಯವನ್ನು ಕುರಿತು ಈಗಾಗಲೇ ಸಾಕಷ್ಟು ಅಧ್ಯಯನಗಳು ನಡೆದಿವೆ. ನವೋದಯ ಕಾವ್ಯವನ್ನು ಕುರಿತು ಸಂಶೋಧನಾ ಪ್ರಬಂಧಗಳನ್ನೆ ಮಂಡನೆ ಮಾಡಲಾಗಿದೆ. ನವೋದಯ ಸಾಹಿತ್ಯದ ಅಧ್ಯಯನವೂ ವಿವಿಧ ತಲೆಬರಹಗಳಡಿಯಲ್ಲಿ ವಿಭಿನ್ನವಾಗಿ ನಡೆದಿದೆ. ನವೋದಯ ಕಾವ್ಯದ ಮೊದಲ ಹೆಜ್ಜೆಗಳು ಆಧುನಿಕ ಕನ್ನಡ ಸಾಹಿತ್ಯಕ್ಕೆ ಭದ್ರಬುನಾದಿಯನ್ನು ಒದಗಿಸಿವೆ. ಹತ್ತೊಂಬತ್ತನೇ ಶತಮಾನದ ಸಾಹಿತ್ಯಿಕ ಸ್ಥಿತ್ಯಂತರಗಳು ಹೊಸ ಬಗೆಯ ಆಲೋಚನೆಯನ್ನು ಪ್ರತಿಯೊಬ್ಬ ಸೃಜನಶೀಲ ಬರಹಗಾರನ ಮೇಲೂ ಉಂಟು ಮಾಡಿವೆ. ಇಂತಹ ಚಿಂತನೆಗಳು ಉತ್ತಮ ಫಲಶ್ರುತಿಯನ್ನು ಗಟ್ಟಿಗೊಳಿಸಿವೆ. 'ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳು' ಈ ತಲೆಬರಹವು ವಿಶಿಷ್ಟವೆನಿಸಿದರೂ ಅಧ್ಯಯನಕ್ಕೆ ವಿಪುಲ ಅವಕಾಶವನ್ನು ಒದಗಿಸಿದೆ. ಆದರೂ ಇದರ ಅಧ್ಯಯನ ನೀರುಕುಡಿದಷ್ಟು ಸುಲಭವಲ್ಲ. ಯಾವುದೇ ವಿಮರ್ಶೆಯು ಸ್ಥಿರವಾಗಿ ನಿಲ್ಲುವುದಿಲ್ಲ. ಹೊಸ ನೀರು ಬಂದಾಗ ಹಳೆನೀರು ಕೊಚ್ಚಿಹೋಗುವಂತೆ ಹೊಸ ವಿಮರ್ಶೆಯು ಹಳೆಯದನ್ನು ಪಕ್ಕಕ್ಕೆ ಸರಿಸಿ ನಿಲ್ಲುತ್ತದೆ. ಒಬ್ಬ ವಿಮರ್ಶಕನಿಗೆ ಮೌಲ್ಯ ಎನಿಸುವಂಥದ್ದು ಮತ್ತೊಬ್ಬನಿಗೆ ಮೌಲ್ಯ ಎನಿಸಿದಿರಬಹುದು. ಇಲ್ಲವೇ ಅದೇ ಮೌಲ್ಯ ಮತ್ತಷ್ಟು ಹೊಳಪನ್ನು ಪಡೆಯಬಹುದು. ಹಾಗಾಗಿ 'ಹೊಸಗನ್ನಡಕಾವ್ಯದ ಮೊದಲ ಹೆಜ್ಜೆಗಳು'

ಎಂಬ ತಲೆ ಬರಹದಡಿಯಲ್ಲಿ ಅಧ್ಯಯನ ನಡೆಯದಿದ್ದರೂ ವಿವಿಧ ತಲೆಬರಹಗಳಡಿಯಲ್ಲಿ ಅಧ್ಯಯನವಂತೂ ನಡೆದಿದೆ.

ಸಂಶೋಧನೆಗೆ ಯೋಗ್ಯವೆನಿಸಿರುವ ಆರಂಭಿಕ ಹೊಸಗನ್ನಡ ಕಾವ್ಯದ ಅಧ್ಯಯನವು ನನ್ನಲ್ಲಿ ಕೌತುಕವನ್ನುಂಟು ಮಾಡಿದ್ದು ನಿಜ. ಸಂಶೋಧಕನಾಗಿ ಈ ವಿಷಯವನ್ನು ಕುರಿತು ಅಧ್ಯಯನ ಮಾಡುತ್ತಿರುವ ನಾನು ಪರಿಗಣಿಸಿಲೇಬೇಕಾಗಿರುವ ಸತ್ಯಸಂಗತಿಗಳು ಕೆಳಕಂಡಂತಿವೆ.

"೧. ಯಾವುದೇ ಕಾವ್ಯಕೃತಿ ಆಗಿರಲಿ-ಅಲ್ಲಿ ಹುದುಗಿರುವ ಸಾರ್ವಕಾಲಿಕ ಮೌಲ್ಯಕ್ಕೆ ನಮ್ಮ ವಿಮರ್ಶೆಯು ಬಾದೆ ತರುವಂತಾಗಬಾರದು.

೨. ಕಾವ್ಯಕೃತಿಗಳು ಮೂಡಿಬಂದ ಯುಗಧರ್ಮವನ್ನು ಸದಾ ಜ್ಞಾಪಕದಲ್ಲಿರಿಸಿಕೊಳ್ಳಬೇಕು.

೩. ಪ್ರಸ್ತುತಕ್ಕೆ ಆ ಕಾವ್ಯ ಎಷ್ಟರಮಟ್ಟಿಗೆ ಸಮಂಜಸ ಎನ್ನುವ ಕಡೆಯೂ ಗಮನಕೊಡಬೇಕು.

೪. ಆಯಾ ಕವಿಯ ಯೋಗ್ಯಸ್ಥಾನವನ್ನು ಸಂಶೋಧನೆ ದೃಢೀಕರಿಸಬೇಕು"[೭]

ಮೇಲಿನ ಸತ್ಯಗಳನ್ನು ಗಮನದಲ್ಲಿರಿಸಿಕೊಂಡು ಕನ್ನಡ ಕಾವ್ಯದ ಮೊದಲ ಹೆಜ್ಜೆಗಳನ್ನು ಗುರಿತಿಸುವುದು ನನ್ನ ಹೊಣೆಗಾರಿಕೆ ಆರಂಭಿಕ ಕನ್ನಡ ಕಾವ್ಯರಚನೆಯ ಹಿನ್ನೆಲೆಯೊಡನೆ ಅದರ ಉದ್ದೇಶಗಳನ್ನು ಸಂಶೋಧನೆಯ ಮೂಲಕ ಹೊರಗೆಡುಹಬೇಕಾಗಿದೆ. ಕಾವ್ಯದ ಮೌಲ್ಯವನ್ನು, ರಚನಕಾರರ ಸಾಹಿತ್ಯಿಕ ಸ್ಥಾನಮಾನವನ್ನು, ನಿರ್ಧರಿಸುವುದರೊಡನೆ ಕಾವ್ಯದ ಫಲಶ್ರುತಿಯನ್ನು ಗುರುತಿಸಬೇಕಾಗಿದೆ.

**ಅಧ್ಯಯನದ ವ್ಯಾಪ್ತಿ**

ಕನ್ನಡ ಕಾವ್ಯಭೂಮಿಕೆಯ ವ್ಯಾಪ್ತಿ ವಿಶಾಲವಾದುದು. ಅದನ್ನು ಒಂದು ಕಾಲಘಟ್ಟದ ಚೌಕಟ್ಟಿಗೆ ಸೀಮಿತಗೊಳಿಸಿಕೊಂಡು ಅಧ್ಯಯನ ಮಾಡುವುದು ಒಳಿತು. ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳನ್ನು ಗುರುತಿಸುವಾಗ ವಹಿಸಬೇಕಾದ ಎಚ್ಚರಿಕೆಗಳನ್ನು ಹಿಂದೆ ಸ್ಪಷ್ಟಪಡಿಸಿದೆ. ಒಂದು ನಿರ್ಧಿಷ್ಟ ವಿಷಯವನ್ನು ಕುರಿತು ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿ ಸಂಶೋಧಕನು ತನ್ನ ಅನುಕೂಲ ಹಾಗೂ ಅಧ್ಯಯನದ ಹಿತದೃಷ್ಟಿಯಿಂದ ವಿಷಯಾಧಾರಿತ ವಿಭಾಗಕ್ರಮ ಮಾಡಿಕೊಳ್ಳುವುದು ಅವಶ್ಯಕ, ಹಾಗಾಗಿ ಹೊಸಗನ್ನಡ ಕಾವ್ಯದ ಆರಂಭಿಕ ಕಾವ್ಯವನ್ನು ಕುರಿತು ಸಂಶೋಧನೆ ನಡೆಸುವಾಗ ವಿಷಯದ ಚೌಕಟ್ಟಿನೊಳಗೆ ವಿವಿಧ ಅಂಶಗಳನ್ನಾಧರಿಸಿ ಕೆಲವು ಅಧ್ಯಾಯಗಳನ್ನಾಗಿ ವಿಭಾಗ ಮಾಡಲಾಗಿದೆ.

ಮೊದಲನೆ ಅಧ್ಯಾಯದಲ್ಲಿ ಅಧ್ಯಯನಕ್ಕೆ ಪೂರಕವೆನಿಸುವ ಪೀಠಿಕೆಯನ್ನು ಒದಗಿಸಲಾಗಿದ್ದು ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಅದರ ಮಹತ್ವವನ್ನು ಕುರಿತು ವಿವರಿಸಿದೆ. ಇಲ್ಲಿ ಸಾಹಿತ್ಯದ ಪರಿಕಲ್ಪನೆ, ಕನ್ನಡ ಸಾಹಿತ್ಯದ ಏಳು-ಬೀಳುಗಳು, ಸಂಶೋಧಕನು ಸಂಶೋಧನಾ ಕಾರ್ಯದಲ್ಲಿ ತೊಡಗುವ ಮೊದಲು ತಿಳಿದಿರಬೇಕಾದ ಸಂಶೋಧನಾ ಸತ್ಯಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿದೆ.

ಎರಡನೇ ಅಧ್ಯಾಯದಲ್ಲಿ ಹೊಸಗನ್ನಡ ಕಾವ್ಯದ ಮೊದಲ ಘಟ್ಟವನ್ನು ಎಲ್ಲಿಂದ ಗುರುತಿಸಬೇಕು? ಕಾವ್ಯದ ಹೊಸತನದ ನಾಂದಿಗೆ ಕಾರಣವೆನಿಸಿದ ಅಂಶಗಳಾದ ಬ್ರಿಟಿಷರ ಆಡಳಿತ, ಇಂಗ್ಲಿಷ್ ಶಿಕ್ಷಣ, ಯೂರೋಪಿನಲ್ಲಾದ ಕೈಗಾರಿಕಾ ಕ್ರಾಂತಿ, ಪಾಶ್ಚಿಮಾತ್ಯ ಶಿಕ್ಷಣ, ಭಾರತದಲ್ಲಿ ಸಮಾಜ ಸುಧಾರಕರಿಂದ ಆರಂಭವಾದ ರಾಷ್ಟ್ರೀಯ ಪುನರುಜ್ಜೀವನ, ರಾಷ್ಟ್ರೀಯ ಹೋರಾಟದ ಅಬ್ಬರ, ಇವುಗಳನ್ನು ಪರಿಚಯಿಸುವುದರೊಡನೆ, ಹೊಸಗನ್ನಡ ಕಾವ್ಯಕೃಷಿಯ ಮೇಲೆ ಇವುಗಳ ಪ್ರೇರಣೆ ಹಾಗೂ ಪ್ರಭಾವಗಳನ್ನು ವಿಶ್ಲೇಷಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಹೊಸಗನ್ನಡ ಕಾವ್ಯದ ಆರಂಭದಲ್ಲಿ ಕ್ರೈಸ್ತ ಪಾದ್ರಿಗಳ ಸೇವೆ, ಕನ್ನಡ ನಾಡಿನಲ್ಲಿ ಶಿಕ್ಷಣ ಹಾಗೂ ಸಾಹಿತ್ಯ ಕ್ರಾಂತಿಗೆ ಕಾರಣವಾದ ಕೆಥಲಿಕ್ ಮಿಷನರಿಗಳು, ಲಂಡನ್ ಮಿಷನ್ ಸಂಸ್ಥೆಯ ಪಾದ್ರಿಗಳು, ವೆಸ್ಲೆಯನ್ ಮಿಷನರಿಗಳು, ಬಾಸೆಲ್ ಮಿಷನರಿಗಳು ಕನ್ನಡ ಸಾಹಿತ್ಯದ ಬೆಳವಣಿಗೆಗೆ ನೀಡಿದ ಕೊಡುಗೆ, ಹಲವು ಹೊಸತನಗಳಿಗೆ ನಾಂದಿ ಹಾಡಿ ಕನ್ನಡ ಕಾವ್ಯ ಪರಂಪರೆಯನ್ನು ಸಮೃದ್ಧಿಗೊಳಿಸಿದ ಪರಿ, ಮುಂತಾದವುಗಳನ್ನು ಕುರಿತು ವಿವರವಾಗಿ ಪರಿಶೀಲಿಸಿದೆ. ಕ್ರೈಸ್ತ ಮಿಷನ್‌ಗಳು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಕನ್ನಡ ನಾಡಿನ ಜನರನ್ನು ಸುಶಿಕ್ಷಿತರನ್ನಾಗಿಸುವಲ್ಲಿ ಮಾಡಿದ ಪ್ರಾಮಾಣಿಕ ಪ್ರಯತ್ನವನ್ನು ಸೂಕ್ಷ್ಮವಾಗಿ ತಿಳಿಸಿದೆ.

ನಾಲ್ಕನೇ ಅಧ್ಯಾಯದಲ್ಲಿ ಹೊಸಗನ್ನಡದ ಮೊದಲ ಘಟ್ಟದಲ್ಲಿ ಕಾವ್ಯಗಳು ರೂಪುಗೊಂಡ ಛಂದೋ ಪ್ರಕಾರಗಳು, ಪರಂಪರಾಗತ ಛಂದಸ್ಸಿನ ಪ್ರಭಾವ, ಪರಂಪರೆಯನ್ನು ಕಳಚುವ ಕವಿಯ ಪ್ರಯತ್ನಗಳನ್ನು ಸೂಚ್ಯವಾಗಿ ಗುರುತಿಸಲಾಗಿದೆ. ಯಥೇಚ್ಛವಾಗಿ ರಚನೆಯಾಗುತ್ತಿದ್ದ ಕ್ರೈಸ್ತಗೀತೆಗಳು, ಸುವಾರ್ತೆಗಳು, ರಂಗಭೂಮಿಯ ಹಾಡುಗಳು, ಜನಪದ ಪ್ರಕಾರವಾದ ಲಾವಣಿಗಳು, ನಾಟಕದ ಅನುವಾದ ಗೀತೆಗಳು, ವರ್ಣನಗೀತೆಗಳು ಮುಂತಾದ ಪ್ರಕಾರಗಳನ್ನು ಸೂಕ್ತ ಸಮಕಾಲೀನ ನಿದರ್ಶಗಳೊಡನೆ ಚರ್ಚಿಸಲಾಗಿದೆ. ಈ ಕಾವ್ಯ ಪ್ರಕಾರಗಳು ಮುಂದೆ ಹೊಸಗನ್ನಡ ಕವಿತೆಗೆ ಹೇಗೆ ಭೂಮಿಕೆಯನ್ನು ನಿರ್ಮಿಸಿವೆ. ಪ್ರಾಚೀನ ಕಾವ್ಯ ರೂಪಗಳನ್ನು ಹೇಗೆ ಮೇಳೈಸಿಕೊಂಡಿವೆ ಎಂಬುದನ್ನೂ ಪರಿಶೀಲಿಸಿದೆ.

ಐದನೇ ಅಧ್ಯಾಯವು ಸಂಶೋಧನಾ ಪ್ರಬಂಧದ ಕೇಂದ್ರ ಬಿಂದುವಾಗಿದ್ದು ಸುದೀರ್ಘವಾಗಿದೆ. ಹೊಸಗನ್ನಡ ಕಾವ್ಯದ ಪ್ರಾರಂಭವನ್ನು ಗುರುತಿಸುವುದರ ಜೊತೆಯನ್ನು ಪ್ರಮುಖ ಕವಿಗಳನ್ನು ಅವರ ಸಾಧನೆಗಳನ್ನು ಸೋದಾಹರಣವಾಗಿ ವಿವರಿಸಿದೆ. ಮುಮ್ಮಡಿಕೃಷ್ಣರಾಜ ಒಡೆಯರ ಅಧಿಕಾರಾವಧಿಯ ಕನ್ನಡ ಕಾವ್ಯ, ಚಾಮರಾಜೇಂದ್ರ ಒಡೆಯರ ಅವಧಿಯಲ್ಲಿ ಕಾವ್ಯದ ಪ್ರಗತಿ, ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿ, ಹೊಸಗನ್ನಡದ ಮುಂಗೋಳಿ ಮುದ್ದಣ, ನರಹರಿ ಜಯರಾಯಾಚಾರ್ಯ, ಚುರುಮುರಿ ಶೇಷಗಿರಿರಾಯ, ಇ.ಪಿ.ರೈಸ್, ಎಸ್.ಜಿ.ನರಸಿಂಹಾಚಾರ್ಯ, ಶಾಂತಕವಿ, ಹಟ್ಟಿಯಂಗಡಿ ನಾರಾಯಣರಾಯ, ಪಂಜೆ ಮಂಗೇಶರಾಯ, ಎಂ.ಗೋವಿಂದ ಪೈ, ಬಿ.ಎಂ.ಶ್ರೀಕಂಠಯ್ಯ, ಕಾವ್ಯಾನಂದ ಪುಣೇಕರ, ಮುಳಿಯ ತಿಮ್ಮಪ್ಪಯ್ಯ, ಕಡೆಂಗೋಡ್ಲು ಶಂಕರಭಟ್ಟ, ಡಿ.ವಿ.ಗುಂಡಪ್ಪ ಮುಂತಾದವರ ಕಾವ್ಯಕೃಷಿಯನ್ನು ಪ್ರತ್ಯೇಕ ಉಪಶೀರ್ಷಿಕೆಗಳ ಅಡಿಯಲ್ಲಿ ಸಮರ್ಪಕ ನಿದರ್ಶನಗಳೊಡನೆ ಚರ್ಚಿಸಲಾಗಿದೆ. ಇವರು ನಿರ್ಮಿಸಿದ ಕಾವ್ಯವು ಮುಂದಿನವರಿಗೆ ನೀಡಿದ ಕೊಡುಗೆಯನ್ನು ಕುರಿತು ಮೌಲ್ಯನಿರ್ಣಯ ಮಾಡಲಾಗಿದೆ.

ಆರನೇ ಅಧ್ಯಾಯದಲ್ಲಿ ಹೊಸಗನ್ನಡದ ಆರಂಭದ ಕವಿಗಳು ಎದುರಿಸಿದ ಸವಾಲುಗಳು, ಕಾವ್ಯರಚನೆಗೆ ಅವರು ಆಯ್ಕೆ ಮಾಡಿಕೊಳ್ಳುತ್ತಿದ್ದ ಛಂದೋ ಪ್ರಕಾರಗಳು, ಕಾವ್ಯದ ವಸ್ತು, ಹಾಗೂ ಭಾಷೆಯ ನಡುವಿನ ಸಂಬಂಧ, ಸಮಕಾಲೀನ ಸಮಾಜ ಕವಿಯ ಮೇಲೆ ಬೀರಿದ ಪ್ರಭಾವ, ಕವಿಯು ಸಂಧಿಕಾಲದ ಸಂಧಿಗ್ಧತೆಯಲ್ಲಿ ಬಳಸುತ್ತಿದ್ದ ಕಾವ್ಯಭಾಷೆ, ಅದರ ಸ್ವರೂಪ ಮುಂತಾದವುಗಳನ್ನು ಕುರಿತು ಸಂಕ್ಷಿಪ್ತವಾಗಿ ವಿಶ್ಲೇಷಿಸಿದೆ.

ಏಳನೇ ಅಧ್ಯಾಯದಲ್ಲಿ ಸಂಶೋಧನೆಯ ಒಟ್ಟು ಪರಿಕಲ್ಪನೆ, ಫಲಶ್ರುತಿಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ, ದರ ಸಾಧಕ-ಬಾಧಕಗಳನ್ನೂ, ಚರ್ಚಿಸಲಾಗಿದೆ. ಹೊಸಗನ್ನಡ ಕಾವ್ಯದ ಆರಂಭದಲ್ಲಿ ರೂಪುಗೊಂಡ ಸಾಹಿತ್ಯದಿಂದ ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಉಂಟಾದ ಪ್ರಭಾವವನ್ನು ಪರಿಚಯಿಸಿದೆ. ಪ್ರಸ್ತುತ ಸಂಶೋಧನಾ ಪ್ರಬಂಧದಿಂದಾಗಬಹುದಾದ ಪ್ರಯೋಜನಗಳನ್ನು ಗುರುತಿಸಲಾಗಿದೆ. ಹೊಸಗನ್ನಡ ಕಾವ್ಯದ ಆರಂಭಿಕ ಬೇರುಗಳು ಕನ್ನಡ ಸಾಹಿತ್ಯವೆಂಬ ಹೆಮ್ಮರಕ್ಕೆ ನೀರೆರೆದು ಪೋಷಣೆ ಮಾಡಿದ ವಿಧಾನವನ್ನು ಸಂಗ್ರಹಿಸಿ ಸಂಕ್ಷಿಪ್ತವಾಗಿ ನೀಡಲಾಗಿದೆ.

ಮೇಲೆ ತಿಳಿಸಿರುವಂತೆ ಮಾಡಿಕೊಂಡಿರುವ ಅಧ್ಯಯನ ವಿಭಾಗಕ್ರಮವು ಕೇವಲ ಸಂಶೋಧನೆಯ ಹಿತದೃಷ್ಟಿಯಿಂದ ಎಂಬುದನ್ನು ಮನಗಾಣಬೇಕು. ಈ ರೀತಿಯ ಅಧ್ಯಯನ ವಿಭಾಗಕ್ರಮವೇ ಅಂತಿಮವಾದುದಲ್ಲ. ಸಂಶೋಧನೆಗೆ ಇರಬಹುದಾದ ವಿಷಯದ ಚೌಕಟ್ಟು, ಕಾಲದ ಮಿತಿ, ಸಂಶೋಧನೆಗೆ ಇರುವ ಅನುಭವದ ಕೊರತೆ ಮುಂತಾದ ಎಲ್ಲ ಅಂಶಗಳೂ ಪ್ರಭಾವ ಬೀರಿವೆ. ಆದರೂ ಸಂಶೋಧನಾ ಮಾರ್ಗದಲ್ಲಿ ಪ್ರಾಮಾಣಿಕವಾಗಿ ಹೆಜ್ಜೆ ಹಾಕಲಾಗಿದೆ.

**ಮಹತ್ವ**

"ಸಾಮಾನ್ಯವಾಗಿ ಯಾವುದೇ ಭಾಷೆಯ ಉದಯದೊಡನೆ ಒಂದು ಬಗೆಯ ಸಾಹಿತ್ಯದ ಉದಯವೂ ಆಗುತ್ತದೆ."[೮] ಒಂದು ಸಾಹಿತ್ಯದ ಉದಯವು ಒಂದೇ ದಿನದಲ್ಲಿ, ಒಂದೇ ಕಾಲದಲ್ಲಿ ಅಥವಾ ಒಬ್ಬನೇ ವ್ಯಕ್ತಿಯಲ್ಲಿ ಮೂರ್ತರೂಪ ಪಡೆದು ಪರಿಪೂರ್ಣವಾಗಲು ಸಾಧ್ಯವಿಲ್ಲ. ಒಂದು ನದಿಯ ಉಗಮವು ವಿವಿಧ ಮೂಲಗಳಿಂದ ಝರಿಯ ರೂಪದಲ್ಲಿ ಆರಂಭವಾಗುವಂತೆ ಸಾಹಿತ್ಯದ ಉಗಮವೂ ವಿವಿಧ ಕಾಲದಲ್ಲಿ, ವಿವಿಧ ರೂಪಗಳಲ್ಲಿ ವಿವಿಧ ಕವಿಗಳಿಂದ ಆರಂಭವಾಗಿ ತನ್ನ ಎತ್ತರ-ಬಿತ್ತರಗಳನ್ನು ನಿರ್ಮಿಸಿಕೊಳ್ಳುತ್ತದೆ. ಈ ರೀತಿಯಲ್ಲಿ ನಿರ್ಮಿತಿಗೊಂಡ ಸಾಹಿತ್ಯದ ಅಧ್ಯಯನದಿಂದ ಅದರ ಒಳತೋಟಗಳನ್ನು ಹೊರಗೆಡಹುವಲ್ಲಿ ಸಂಶೋಧಕನು ಯಶಸ್ವಿಯಾಗುತ್ತಾನೆ. ಆಗ ಮಾತ್ರ ಸಾಹಿತ್ಯ ಹಾಗೂ ಸಾಹಿತಿ ಎರಡಕ್ಕೂ ನಿಜವಾದ ಮೌಲ್ಯ ನಿರ್ಧಾರವಾಗುತ್ತದೆ. ಸಾಮಾನ್ಯ ಓದುಗನಿಗೆ ದಕ್ಕಲಾಗದಿದ್ದ ಅನುಭವಗಳನ್ನು ಸಂಶೋಧಕನು ಹೆಕ್ಕಿ ಹೊರತರುವುದರಿಂದ ಕೃತಿಯ ಮತ್ತು ಕೃತಿಕಾರನ ಘನತೆ ವೃದ್ಧಿಯಾಗುತ್ತದೆ.

ಸೃಜನಕಾರ್ಯದಿಂದ ಕಾವ್ಯ ಮೂಡಿದರೆ ಸಂಶೋಧನೆಯಿಂದ ಅದರ ಸ್ಥಾನಮಾನ ನಿರ್ಣಯವಾಗುತ್ತದೆ. ಸೃಜನಕ್ರಿಯೆ ಭಾವಪ್ರಧಾನವಾದರೆ ಸಂಶೋಧನೆಯು ಬುದ್ಧಿ ಪ್ರಧಾನವಾಗುತ್ತದೆ.

ಸಂಶೋಧಕನು ಕಾವ್ಯವನ್ನು ಕೂಲಂಕಶವಾಗಿ ಅಧ್ಯಯನ ಮಾಡಿ ವಿಶ್ಲೇಷಣೆ ಮಾಡುವ ಮೂಲಕ ಕಾವ್ಯದಲ್ಲಡಗಿದ್ದ ನಿಗೂಢತೆಗಳನ್ನೂ ಸಾಮಾನ್ಯ ಓದುಗನ ಮುಂದೆ ಎಚ್ಚರದಿಂದ ಬಿಚ್ಚಿಡುತ್ತಾನೆ. ಕಾವ್ಯದಲ್ಲಿರುವ ಕವಿಯ ಭಾವನೆಗಳು ಶ್ರೀಸಾಮಾನ್ಯನಿಗೆ ಅಷ್ಟು ಸುಲಭವಾಗಿ ದಕ್ಕುವುದಿಲ್ಲ. ಸಂಶೋಧಕ ಅದನ್ನು ಸುಲಭವಾಗಿಸುವಲ್ಲಿ ಪ್ರಯತ್ನಿಸುತ್ತಾನೆ. ಕಾವ್ಯದ ಪ್ರಸ್ತುತತೆಯನ್ನು, ಅದರಲ್ಲಿಡಗಿರುವ ಸಾಮಾಜಿಕ ಸಂವೇದನೆಯನ್ನು ಸಾಂಸ್ಕೃತಿಕ ಮೌಲ್ಯಗಳನ್ನು ಸಂಶೋಧಕ ಎತ್ತಿ ಹಿಡಿಯುತ್ತಾನೆ. ಆದ್ದರಿಂದ 'ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳು' ಎಂಬ ತಲೆಬರಹದ ವಿಷಯವು ಸಂಶೋಧನಾರ್ಹವಾಗಿದ್ದು, ಅತ್ಯಂತ ಮಹತ್ವಪೂರ್ಣವೆನಿಸುತ್ತದೆ.

ಪಂಪಯುಗವು ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಭದ್ರತಳಹದಿಯನ್ನು ಒದಗಿಸಿ ಉಜ್ವಲ ಭವಿಷ್ಯಕ್ಕೆ ಕಾರಣವಾದಂತೆ ಆಧುನಿಕ ಕನ್ನಡ ಸಾಹಿತ್ಯದ ನವೋದಯ ಪಂಥವು ಅರ್ವಾಚೀನ ಕನ್ನಡ ಸಾಹಿತ್ಯಕ್ಕೆ ಹೆದ್ದಾರಿಯನ್ನು ನಿರ್ಮಿಸಿ ಹೊಸ ದಿಗ್ದರ್ಶನವನ್ನು ಮಾಡಿತು. ಇಂಥ ಸಾಹಿತ್ಯದ ಪಳೆಯುಳಿಕೆಗಳ ಫಲಶ್ರುತಿಯು ಇಂದಿಗೂ ಗೋಚರಿಸುತ್ತಿರುವುದನ್ನು ಗಮನಿಸಿದಾಗ ಅದರ ಮಹತ್ವವನ್ನು ಪುನಃ ಪುನಃ ನಿಷ್ಕರ್ಷೆಗೆ ಒಳಪಡಿಸಿ ಹೊಸ ದೃಷ್ಟಿಕೋನಗಳಿಂದ ನೋಡುವುದು ಅತ್ಯಗತ್ಯ. ಕನ್ನಡ ಸಾಹಿತ್ಯದ ಬೃಹತ್ತು ಮಹತ್ತುಗಳಿಗೆ ಕಾರಣವಾದ ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳನ್ನು ಕೂಲಂಕಶವಾಗಿ ಅಧ್ಯಯನ ಮಾಡಬೇಕಾಗುತ್ತದೆ. ಅಂದಿನ ಸಾಹಿತ್ಯದ ಪ್ರಧಾನ ಪ್ರೇರಣೆಗಳು, ಪ್ರಮುಖ ಕವಿಗಳ ದೃಷ್ಟಿಕೋನ, ಅವರು ತಮ್ಮ ಅನುಭವಗಳ ಅಭಿವ್ಯಕ್ತಿಗೆ ಆಯ್ಕೆ ಮಾಡಿಕೊಳ್ಳುತ್ತಿದ್ದ ಕಾವ್ಯ ಪ್ರಕಾರಗಳು, ಸಮಾಜದ ಮೇಲೆ ಸಾಹಿತ್ಯದ ಪ್ರಭಾವ ಹಾಗೂ ಸಾಹಿತ್ಯದ ಮೇಲೆ ಸಾಮಾಜಿಕ ಸ್ಥಿತಿಗತಿಗಳ ಪ್ರಭಾವ ಮುಂತಾದ ಅಂಶಗಳನ್ನು ಕುರಿತು ಅಧ್ಯಯನ ಮಾಡುವುದರ ಮೂಲಕ ಹೊಸ ಹೊಳಹುಗಳನ್ನು ಹೊರಗೆಡಹುದರಿಂದ ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳ ಮಹತ್ವವನ್ನು ಅರಿಯಬಹುದು.



## ಅಡಿ ಟಿಪ್ಪಣಿ

೧. ಸಂ.ಹಾ.ಮಾ.ನಾಯಕ, ಬಿಡುಗಡೆಯ ಬೆಳ್ಳಿ, ಪುಟ -೨೬, ಕುವೆಂಪು-ಉದ್ಘಾಟನಾ ಭಾಷಣ.

೨. ಎಚ್.ಎಸ್.ರಾಘುವೇಂದ್ರರಾವ್-ಹಾಡೆ ಹಾದಿಯ ತೋರಿತು, ಪುಟ ೩.

೩. ಸಂ.ಡಾ||ಶಂಕರಮೊಕಾಶಿ ಪುಣೇಕರ್, ಡಾ|| ಸಿ.ಪಿ.ಕೃಷ್ಣಕುಮಾರ್, ಕನ್ನಡ ವಿಮರ್ಶೆ, ಪುಟ ೧೨, ಲೇ.ಕಾವ್ಯದಲ್ಲಿ ಜೀವನ ತತ್ವದರ್ಶನ, ಡಿ.ವಿ.ಜಿ.

೪. ಬಿ.ಎಂ.ಶ್ರೀ., ಕನ್ನಡ ಕೈಪಿಡಿ ಸಂ.೨, ಪುಟ ೪೭೯.

೫. ರಂ.ಶ್ರೀ.ಮುಗುಳಿ-ಕನ್ನಡ ಸಾಹಿತ್ಯ ಚರಿತ್ರೆ, ಪುಟ ೩೮೫.

೬. ಡಾ|| ದೊಡ್ಡರಂಗೇಗೌಡ-ಕನ್ನಡ ನವೋದಯ ಕಾವ್ಯ, ಪುಟ ೨೩.

೭. ಅದೇ, ಪುಟ ೨೭.

೮. ರಂ.ಶ್ರೀ. ಮುಗುಳಿ-ಕನ್ನಡ ಸಾಹಿತ್ಯ ಚರಿತ್ರೆ, ಪುಟ ೧.

## ಹೊಸಗನ್ನಡದ ಮೊದಲ ಘಟ್ಟದ ಕಾವ್ಯನಿರ್ಮಿತಿಗೆ ಪ್ರೇರಣೆಗಳು ಹಾಗೂ ಪ್ರಭಾವಗಳು

"ಹೊಸಗನ್ನಡ ಸಾಹಿತ್ಯದ ಉದಯ ಕಾಲವನ್ನು ವಿದ್ವಾಂಸರು ಈವರೆಗೆ ೧೭೬೪ ಎಂದು ಸಾಮಾನ್ಯವಾಗಿ ಒಪ್ಪಿಕೊಂಡಿದ್ದಾರೆ"[೧] ಎಂಬ ಡಾ||ಹಾ.ಮಾ.ನಾಯಕರ ಮಾತು ಕಾಲದ ದೃಷ್ಟಿಯಿಂದ ಒಪ್ಪಿತವಾದರೂ ನಿಜವಾದ ಹೊಸಗನ್ನಡ ಕಾವ್ಯ ಪರಂಪರೆಯ ಆರಂಭ ಆಧುನಿಕ ಕನ್ನಡ ಕಾವ್ಯದ ಮುಂಗೋಳಿ ಮುದ್ದಣನಿಂದ. ಪಶ್ಚಿಮದಿಂದ ಬೀಸಿದ ತಂಗಾಳಿಯು ಕನ್ನಡ ಕಾವ್ಯಜಗತ್ತಿಗೆ ತಂಪನ್ನೆರೆಯಿತು. ಸ್ಥಗಿತವಾಗಿದ್ದ ಕಾವ್ಯ ಪರಂಪರೆಗೆ ಸಂಚಲನದ ಚುರುಕು ಮುಟ್ಟಿ ಬೃಹದಾಕಾರವಾಗಿ ಬೆಳೆಯಲು ಭೂಮಿಕೆಯನ್ನು ಒದಗಿಸಿತು. ಕಾವ್ಯದ ವಸ್ತು, ಛಂದೋಪ್ರಕಾರ, ಕಾವ್ಯದಲ್ಲಿ ವ್ಯಕ್ತವಾಗುತ್ತಿದ್ದ ಭಾಷೆ, ಕವಿಯ ಮನೊಭಾವ, ಸಹೃದಯ ಸೆಳತಗಳು ಮುಂತಾದ ಅಂಶಗಳೆಲ್ಲವೂ ಪಲ್ಲಟಗೊಳ್ಳತೊಡಗಿದವು. ನಾವೀನ್ಯತೆಯು ಎಲ್ಲ ಕಡೆ ಪ್ರವಹಿಸಿತು. "ಕಾವ್ಯವು ಕಾಲದಿಂದ ಕಾಲಕ್ಕೆ ಹಳೆಯರೂಪಗಳನ್ನು ನಿಧಾನವಾಗಿ ಕಳಚುತ್ತಾ ಹೊಸರೂಪಗಳನ್ನು ತೊಡುತ್ತಾ ಬೆರಳೆಣಿಕೆಗೆ ನಿಲುಕುವ ಕೆಲವೇ ತಿರುವುಗಳಲ್ಲಿ ಹಾಯ್ದು ಸಮೃದ್ಧವಾಗಿ ಬೆಳೆಯತೊಡಗಿತು."[೨] ಕನ್ನಡ ಭಾಷೆಯಲ್ಲಿಯೂ ಭಾರತೀಯ ಸಾಹಿತ್ಯದಂತೆ ಸಮೃದ್ಧಿಯ ಹೊಸ ಶಕೆ ಆರಂಭವಾಯಿತು. ಕನ್ನಡದಲ್ಲಿ ಕಾವ್ಯವು ವ್ಯಾಪಕ ಸಮೃದ್ಧಿಯತ್ತ ಅಡಿಯಿಡಲು ಹಲವಾರು ಪ್ರೇರಣೆ ಪ್ರಭಾವಗಳಿದ್ದು. ಅವುಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

೧. ಬ್ರಿಟಿಷ್ ಆಡಳಿತ

೨. ಇಂಗ್ಲಿಷ್ ಶಿಕ್ಷಣ ಪದ್ಧತಿ

೩. ಕೈಗಾರಿಕಾ ಕ್ರಾಂತಿ

೪. ಪಾಶ್ಚಾತ್ಯ ಸಾಹಿತ್ಯ

೫. ರಾಷ್ಟ್ರೀಯ ಪುನರುಜ್ಜೀವನ

೬. ರಾಷ್ಟ್ರೀಯ ಹೋರಾಟದ ಅಬ್ಬರ

### ೧. ಬ್ರಿಟಿಷ್ ಆಡಳಿತ

ಐರೋಪ್ಯರು ಕ್ರಿ.ಶ.೧೯ನೇ ಶತಮಾನದಲ್ಲಿ ಭಾರತಕ್ಕೆ ಆಗಮಿಸಿ ದೇಶದ ಆಡಳಿತದತ್ತ ಆಸಕ್ತಿ ವಹಿಸದಿದ್ದರೂ, ನಿಧಾನವಾಗಿ ನೆಲೆಯೂರತೊಡಗಿದ ಅವರ ಗಮನ ಆಡಳಿತದತ್ತ ಹೊರಳಿತು. ಪೋರ್ಚುಗೀಸರು, ಫ್ರೆಂಚರು, ಬ್ರಿಟಿಷರು ಹಾಗೂ ಡಚ್ಚರು ಕಂಪನಿಗಳನ್ನು ಸ್ಥಾಪಿಸಿಕೊಂಡು ತಮ್ಮ ವಸಾಹತುಗಳನ್ನು ವಿಸ್ತರಿಸಿಕೊಂಡು ಭದ್ರವಾಗಿ ಭಾರತದಲ್ಲಿ ನೆಲೆಯೂರಲು ಪರಸ್ಪರ ಪೈಪೋಟಿಗಳಿದರು. ಅಂತಿಮವಾಗಿ ಬ್ರಿಟಿಷರು ಗಟ್ಟಿಯಾಗಿ ನೆಲೆಯನ್ನು ಕಂಡುಕೊಂಡು ಸ್ಥಳೀಯ ಆಡಳಿತದಲ್ಲಿ ನಿಯಂತ್ರಣ ಸಾಧಿಸುವಲ್ಲಿ ಯಶಸ್ವಿಯಾದರು. ಅವರು ಜಾರಿಗೊಳಿಸಿದ ಆಡಳಿತ ವ್ಯವಸ್ಥೆಯು ಭಾರತದಲ್ಲಿ ಆಡಳಿತಾತ್ಮಕವಾಗಿ ಹೊಸ ಕ್ರಾಂತಿಗೆ ನಾಂದಿಯಾಯಿತು. ಈ ಕ್ರಾಂತಿಯು ಕರ್ನಾಟಕದ ಮೇಲೆ ದಟ್ಟವಾದ

ಪ್ರಭಾವ ಬೀರಿತು. ಬ್ರಿಟಿಷ್ ಅಧಿಕಾರಿಗಳ ಪಾರದರ್ಶಕ ಕಾರ್ಯಕ್ಷಮತೆಯು ನಾಡಿನ ಜನತೆಯನ್ನು ಬೆರಗುಗೊಳಿಸಿತು. ಆಡಳಿತದ ವಿಕೇಂದ್ರೀಕರಣ ವ್ಯವಸ್ಥೆಯಿಂದಾಗಿ ಹಂತ ಹಂತವಾಗಿ ತಳಮಟ್ಟದ ಜನತೆಗೂ ಸೌಲಭ್ಯಗಳು ವಿಸ್ತರಿಸತೊಡಗಿದವು. ಅಸ್ಥಿರ, ದುರಾಕ್ರಮಣ, ಸಾಮ್ರಾಜ್ಯ ಶಾಹಿ ರಾಜಕೀಯದ ಅಶಾಂತ ವಾತಾವರಣವು ಕಣ್ಮರೆಯಾಗಿ ಜನತೆಯು ನೆಮ್ಮದಿಯ ನಿಟ್ಟುಸಿರು ಬಿಟ್ಟರು. ಸಾರಿಗೆ ಸಂಪರ್ಕ ವ್ಯವಸ್ಥೆ. ಮೂಲಭೂತ ಸೌಲಭ್ಯಗಳಾದ ಶಿಕ್ಷಣ, ಆರೋಗ್ಯ, ವಸತಿ ಸೌಕರ್ಯಗಳನ್ನು ಒದಗಿಸಲು ಸ್ಥಳೀಯಾಡಳಿತದ ಸಬಲೀಕರಣವೂ ನಡೆಯಿತು. ಸ್ಥಿರ ಸರ್ಕಾರ, ಸ್ಥಿರ ಕಾನೂನುಗಳು, ಸೌಲಭ್ಯಗಳು ಕನ್ನಡಿಗರಲ್ಲಿ ಹೊಸ ಚೈತನ್ಯ ತುಂಬಿದವು. ಪ್ರತಿಯೊಬ್ಬರಿಗೂ ಸಮಾನ ಅವಕಾಶಗಳು. ಸಮನಾದ ಸೌಕರ್ಯಗಳು ಲಭಿಸಿದ್ದರಿಂದ ಅಸಮಾನತೆಯ ಶಾಪ ನಿಧಾನವಾಗಿ ಪರಿಹಾರವಾಗಲು ವೇದಿಕೆ ಸಿದ್ಧಗೊಂಡಿತು.

**೨. ಇಂಗ್ಲಿಷ್ ಶಿಕ್ಷಣ ಪದ್ಧತಿ**

ಬ್ರಿಟಿಷರು ಭಾರತದಲ್ಲಿ ಶೈಕ್ಷಣಿಕ ಕ್ರಾಂತಿಯನ್ನುಂಟು ಮಾಡಿದರು. ಲಾರ್ಡ್ ಮೆಕಾಲೆಯ ಶಿಫಾರಸ್ಸಿನ ಮೇರೆಗೆ ವಿಲಿಯಂ ಬೆಂಟಿಂಕನು ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದನು. ರಾಜಾರಾಂ ಮೋಹನರಾಯ್ ಅವರಂಥ ಪ್ರಜ್ಞಾವಂತರ ಒತ್ತಾಸೆಯು ಈ ಜಾರಿಯ ಹಿಂದೆ ಕೆಲಸ ಮಾಡಿದೆ. ಇದರ ಪ್ರಭಾವ ಕರ್ನಾಟಕದ ಮೇಲೂ ಆಗಿದೆ. ಕನ್ನಡ ನಾಡಿನಲ್ಲಿ ಶೈಕ್ಷಣಿಕ ಸುಧಾರಣೆಗೆ ನಾಂದಿ ಹಾಡಿದವರೆಂದರೆ ಮದ್ರಾಸ್‌ನ ಗವರ್ನರ್ ಮನ್ರೊ ಹಾಗೂ ಮುಂಬೈ ಗೌರ್ನರ್ ಎಲ್‌ಫಿನ್‌ಸ್ಟೆನ್. ಎಲ್‌ಫಿನ್‌ಸ್ಟನ್‌ರು ಬಾಂಬೆ ಎಜುಕೇಷನ್ ಸೊಸೈಟಿ ಮತ್ತು ನೇಟಿವ್ ಸ್ಕೂಲ್ ಅಂಡ್ ಬುಕ್ ಸೊಸೈಟಿಗಳ ಮೂಲಕ ಶಿಕ್ಷಣದ ರೂಪುರೇಷೆಗಳನ್ನು ನಿರ್ಮಿಸಿದರು. ಕನ್ನಡ ಭಾಷೆಯಲ್ಲಿ ಪಾಶ್ಚಾತ್ಯ ವಿಚಾರಧಾರೆಗಳನ್ನು ಪುಸ್ತಕಗಳ ರೂಪದಲ್ಲಿ ಮುದ್ರಿಸಿ ಶಿಕ್ಷಣದ ಬೆಳವಣಿಗೆಗೆ ಕಾರಣ ಪುರುಷರಾದ ವಾಲ್ಟರ್ ಎಲಿಯಟ್ ಕರ್ನಾಟಕದ ಶೈಕ್ಷಣಿಕ ರಂಗದಲ್ಲಿ ಮಹತ್ವದ ಸ್ಥಾನ ಪಡೆದಿದ್ದಾರೆ. "ಧಾರವಾಡದಂಥ ಸಂಪೂರ್ಣ ಕನ್ನಡ ಪ್ರದೇಶದಲ್ಲಿ ಸರಕಾರವು ಮರಾಠಿ ಶಾಲೆಯೊಂದನ್ನು ಸ್ಥಾಪಿಸಿದ್ದಾಗ 'ಅದು ತಪ್ಪು, ಇಲ್ಲಿಯ ಜನರ ಭಾಷೆ ಕನ್ನಡ, ಮಾತೃಭಾಷೆಯಲ್ಲಿಯೇ ಶಿಕ್ಷಣ ನಡೆಯ ಬೇಕಾದದ್ದು' ಎಂದು ವರದಿ ಮಾಡಿದ್ದಲ್ಲದೆ ಒಂದು ಕನ್ನಡ ಶಾಲೆಯನ್ನು ಆರಂಭಿಸಿ ಮೂರು ವರ್ಷಗಳ ಕಾಲ ಒಬ್ಬನೇ ಅದರ ವೆಚ್ಚವನ್ನು ವಹಿಸಿ ಆತ ನಡೆಸಿದ್ದನು."[೩]

ಮುಂಬೈ ಸರ್ಕಾರವು ಮುಂಬೈ ಕರ್ನಾಟಕದ ಜನರ ಭಾಷೆಯಾದ ಕನ್ನಡದಲ್ಲಿಯೇ ಶಿಕ್ಷಣವನ್ನು ನೀಡುವ ಮಹತ್ವಪೂರ್ಣ ನಿರ್ಣಯವನ್ನು ಕೈಗೊಂಡಿತು. ಮುಂಬೈ ಪ್ರಾಂತ್ಯದ ಶಿಕ್ಷಣಾಧಿಕಾರಿ ಬಾಳಶಾಸ್ತ್ರಿ ಜಾಂಭೇಕರರ ಅಧ್ಯಕ್ಷತೆಯಲ್ಲಿ ಹುಬ್ಬಳ್ಳಿಯ ಕೈ.ಬಾ. ಗಾಡಗೀಳ, ಕಿತ್ತೂರಿನ ಶ್ರೀನಿವಾಸ ಶಂಭಜಿಯವರನ್ನೊಳಗೊಂಡಂತೆ ಕನ್ನಡ ಪಠ್ಯಪುಸ್ತಕ ರಚನಾ ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯು ಬೆಂಗಳೂರು ಮತ್ತು ಮಂಗಳೂರುಗಳಲ್ಲಿ ಕಾರ್ಯನಿರತವಾಗಿದ್ದ ಮಿಷನ್‌ಗಳ ಕನ್ನಡ ಸೇವೆಯನ್ನು ಬಳಸಿಕೊಂಡು ಕನ್ನಡ ಭಾಷೆಯ ಪಠ್ಯಪುಸ್ತಕಗಳನ್ನು ರಚಿಸಿದಾಗ ಇಲ್ಲಿನ ಶಿಕ್ಷಣಾಧಿಕಾರಿಗಳು, ಶಿಕ್ಷಕರ, ಶಿಕ್ಷಣ ಚಿಂತಕರ, ವಿದ್ಯಾರ್ಥಿಗಳ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಕನ್ನಡ ಪಠ್ಯಪುಸ್ತಕ ರಚನಾಕಾರ್ಯವನ್ನು ಮದ್ರಾಸ್, ಮೈಸೂರು, ಸರ್ಕಾರಗಳಿಗಿಂತಲೂ ಮುಂಬೈ ಸರ್ಕಾರವೇ ಮೊದಲು

ಮಾಡಿತು. ಕೊಡಗಿನಲ್ಲಿ ಸ್ಥಾಪನೆಯಾದ ಕಂಪನಿಯ ಇಂಗ್ಲಿಷ್ ಶಾಲೆ, ಬೆಳಗಾವಿಯ ಸರ್ದಾರ ಹೈಸ್ಕೂಲು, ಧಾರವಾಡದ ಕನ್ನಡ ಶಾಲೆಗಳು ಶೈಕ್ಷಣಿಕ ಬೆಳವಣಿಗೆಗೆ ಕಾರಣೀಭೂತವಾದವುಗಳಾಗಿವೆ.

ಮಿಷನರಿಗಳು ಮದ್ರಾಸ್ ಹಾಗೂ ಮೈಸೂರು ಪ್ರಾಂತ್ಯಗಳಲ್ಲಿ ಶೈಕ್ಷಣಿಕ ಪ್ರಗತಿಗೆ ಯೋಜಿತ ಕಾರ್ಯಕ್ರಮ ರೂಪಿಸಿದವು. ಲಂಡನ್ ಮಿಷನರಿಗಳು ಬಳ್ಳಾರಿ ಮತ್ತು ಬೆಂಗಳೂರುಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದವು. ವೆಸ್ಲೆಯನ್ ಮಿಷನರಿಗಳು ಬೆಂಗಳೂರು, ಮೈಸೂರು, ಶಿವಮೊಗ್ಗ ಮುಂತಾದ ಕಡೆಗಳಲ್ಲಿ ಶಾಲೆ, ಕಾಲೇಜು ಹಾಗೂ ತರಬೇತಿ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು. ಬಾಸೆಲ್ ಮಿಷನರಿಗಳು ಮಂಗಳೂರು, ಧಾರವಾಡ ಮುಂತಾದ ಕಡೆ ವ್ಯಾಪಕ ಹಾಗೂ ತ್ವರಿತ ಗತಿಯಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ಹಮ್ಮಿಕೊಂಡರು. ಶಿಕ್ಷಣದ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಮೋಗ್ಲಿಂಗ್ "ಕ್ರಿ.ಶ.೧೮೫೭ರ ಹೊತ್ತಿಗೆ ೫೦ ಪ್ರಾಥಮಿಕ ಶಾಲೆಗಳನ್ನು, ೮ ಹೈಸ್ಕೂಲುಗಳನ್ನು ನಡೆಸುತ್ತಿದ್ದರು. ಶಾಲೆಗಳಲ್ಲಿ ಶಿಸ್ತನ್ನು ಚನ್ನಾಗಿ ಕಾಯ್ದುಕೊಳ್ಳಲಾಗುತ್ತಿತ್ತು.... ಔದ್ಯೋಗಿಕ ಶಾಲೆಗಳನ್ನು ನಡೆಸಿದುದು ಇವರದೊಂದು ವೈಶಿಷ್ಟ್ಯವಾಗಿದೆ. ಸ್ತ್ರೀಯರ ಶಿಕ್ಷಣಕ್ಕೂ ಮನಸುಗೊಟ್ಟು ಹಲವಾರು ಬೋರ್ಡಿಂಗ್ ಶಾಲೆಗಳನ್ನು ಆರಂಭಿಸಿದರು.. ಕ್ರಿಶ್ಚಿಯನ್ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವು ಉಚಿತವೂ, ಕಡ್ಡಾಯವೂ ಆಗುವಂತೆ ನೋಡಿಕೊಂಡರು."[೪]

ಬೆಂಗಳೂರಿನಲ್ಲಿದ್ದ ರೋಮನ್ ಕೆಥಲಿಕ್ ಸಂಘ ಹಾಗೂ ಮಂಗಳೂರಿನ ಸೊಸೈಟಿ ಆಫ್ ಜೀಸಸ್ ಸಂಸ್ಥೆಯವರು ಕರ್ನಾಟಕದಲ್ಲಿ ಅನೇಕ ಶಾಲಾ-ಕಾಲೇಜುಗಳನ್ನು ಸ್ಥಾಪಿಸುವ ಮೂಲಕ ಶಿಕ್ಷಣವನ್ನು ಅಭಿವೃದ್ಧಿ ಪಡಿಸಿದರು. ಮೈಸೂರು ಸಂಸ್ಥಾನವು ಕ್ರಿ.ಶ.೧೮೬೧ರಲ್ಲಿ ಮೊದಲ ಬಾರಿಗೆ ಶಿಕ್ಷಕ ತರಬೇತಿ ಕೇಂದ್ರವನ್ನು ಸ್ಥಾಪಿಸಿದುದು ಶಿಕ್ಷಣೋದ್ಯಮದ ಅಭ್ಯುದಯಕ್ಕೆ ಕಾರಣವಾಯಿತು. ಬಿ.ಎಲ್.ರೈಸ್. ಅವರ ಪರಿಶ್ರಮದಿಂದಾಗಿ ಹೋಬಳಿಗೊಂದು ಶಾಲೆಗಳು ಸ್ಥಾಪನೆಯಾದವು. ಚಾಮರಾಜೇಂದ್ರ ಒಡೆಯರು ಮೈಸೂರಿನಲ್ಲಿ ಕರ್ನಾಟಕ "ಭಾಷೋ ಜ್ಜೀವಿನೀ ಸಭಾ" ಬೆಂಗಳೂರಿನಲ್ಲಿ ಸಂಸ್ಕೃತ ವಿದ್ಯಾಲಯವನ್ನು ಕಟ್ಟಿ ಬೆಳೆಸಿದರು. ಮದ್ರಾಸ್ ಮತ್ತು ಮುಂಬೈ ವಿಶ್ವವಿದ್ಯಾಲಯಗಳು ಬ್ರಿಟಿಷ್ ಶಿಕ್ಷಣ ಪದ್ಧತಿಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಿ ಕನ್ನಡ ನಾಡಿನ ಶೈಕ್ಷಣಿಕ ಪ್ರಗತಿಗೆ ನೆರವಾದವು.

ಮೇಲೆ ತಿಳಿದಂತೆ ಬ್ರಿಟಿಷ್ ಶಿಕ್ಷಣ ಪದ್ಧತಿಯು ಪಾಶ್ಚಾತ್ಯ ವಿಚಾರಧಾರೆಗಳನ್ನು ಭಿತ್ತಿ ಕನ್ನಡ ನಾಡಿನ ಯುವಚೇತನಗಳಿಗೆ ವರದಾನವಾಗಿ ಪರಿಣಮಿಸಿತು. "ಇಂಗ್ಲಿಷ್ ಶಿಕ್ಷಣ ಪಡೆದ ಹೊಸಪೀಳಿಗೆಯ ಸಾಮಾನ್ಯ ಜನ ನವೀನ ಸಾಹಿತ್ಯದ ಹರಿಕಾರರಾದರು. ರೂಪ, ವಸ್ತು, ಭಾವ, ಭಾಷೆಗಳಲ್ಲಿ ಸಾಹಿತ್ಯ ಹೊಸತನವನ್ನು ತಾಳಿತು."[೫] ಕನ್ನಡ ಕಾವ್ಯಪರಂಪರೆಯು ನಿರಂತರವಾಗಿ ಬೆಳೆಯತೊಡಗಿತು. ಹೊಸ ಪೀಳಿಗೆಯು ಹೊಸತನವನ್ನೂ ಹೊಸ ದೇಶಾಭಿಮಾನವನ್ನೂ ಹೊಸ ಸಾಹಿತ್ಯ ರುಚಿಯನ್ನು ಹೊಸ ವಿಧಾನಗಳಲ್ಲಿ ಅಭಿವ್ಯಕ್ತ ಪಡಿಸಿತು.

**೩. ಯೂರೋಪಿನಲ್ಲಿ ಆದ ಕೈಗಾರಿಕಾ ಕ್ರಾಂತಿ**

ಕ್ರಿ.ಶ.೧೮೫೦ರಲ್ಲಿ ಯೂರೋಪಿನಾದ್ಯಂತ ಉಂಟಾದ ಕೈಗಾರಿಕಾ ಕ್ರಾಂತಿಯ ಪ್ರವಾಹವು

ಭಾರತದತ್ತ ಹರಿಯಿತು. ಔದ್ಯೋಗಿಕ ಕ್ಷೇತ್ರವು ತನ್ನ ಜಾಲವನ್ನು ತ್ವರಿತವಾಗಿ ವಿಸ್ತರಿಸಿಕೊಂಡಿತು. ಪಾಶ್ಚಾತ್ಯ ತಂತ್ರಜ್ಞಾನವನ್ನಳವಡಿಸಿದ ಹತ್ತಿಬಟ್ಟೆ, ಸೆಣಬು, ಸಿಮೆಂಟ್, ಕಾಗದ ಮುಂತಾದ ಕೈಗಾರಿಕೆಗಳು ಮುಂಬೈ, ಕಲ್ಕತ್ತ, ಅಹಮದಾಬಾದ್, ಮದರಾಸುಗಳಲ್ಲಿ ಸ್ಥಾಪನೆಯಾದವು. ಕೈಗಾರಿಕೆಗಳ ಕಚ್ಚಾವಸ್ತು ಮತ್ತು ಸಿದ್ಧವಸ್ತುಗಳ ಸಾಗಾಟಕ್ಕೆ ವಿಲಿಯಂ ಬೆಂಟಿಂಕ್‌ನ ಅವಧಿಯಲ್ಲಿ ಸರ್ವಋತು ರಾಜಮಾರ್ಗ ನಿರ್ಮಾಣದ ಯೋಜನೆ ರೂಪುಗೊಂಡಿತು. ಡಾಲ್ಹೌಸಿಯು ಭಾರತದಲ್ಲಿ ಪ್ರಥಮಬಾರಿಗೆ ಮುಂಬೈ ಮತ್ತು ಠಾಣಾ ನಡುವೆ ರೈಲ್ವೆ ಸಂಪರ್ಕ ಕಲ್ಪಿಸುವ ಮೂಲಕ ಸಾರಿಗೆ ವ್ಯವಸ್ಥೆಯ ತ್ವರಿತ ಬೆಳವಣಿಗೆಗೆ ಅಡಿಪಾಯ ಹಾಕಿಕೊಟ್ಟರು. ಅಂಚೆ ಮತ್ತು ತಂತಿ ವ್ಯವಸ್ಥೆಯನ್ನು ಜಾರಿಗೊಳಿಸುವ ಮೂಲಕ ಭಾರತದಾದ್ಯಂತ ವಿಚಾರ ವಿನಿಮಯ, ಕೊಳುಕೊಡುಗೆ, ವ್ಯವಹಾರಗಳಿಗೆ ಅವಕಾಶ ಲಭಿಸಿದಂತಾಯಿತು.

ಕರ್ನಾಟಕದ ಮೇಲೆ ಕೈಗಾರಿಕಾ ಕ್ರಾಂತಿಯ ಪ್ರಭಾವ ದಟ್ಟವಾಗಿ ಬೀರಿತು. ಮೈಸೂರಿನ ದಿವಾನರಾಗಿದ್ದ ರಂಗಾಚಾರ್ಲು ಬೆಂಗಳೂರು ಮೈಸೂರಿಗೆ ರೈಲ್ವೆ ಸಂಪರ್ಕ ಕಲ್ಪಿಸಿದರು. ಶಿವನ ಸಮುದ್ರದಲ್ಲಿ ಜಲವಿದ್ಯುತ್ ಉತ್ಪಾದನೆಗೆ ಅಸ್ತಿಭಾರ ಹಾಕಿದರು. ಸರ್.ಎಂ.ವಿಶ್ವೇಶ್ವರಯ್ಯನವರು ತಮ್ಮ ಅವಧಿಯಲ್ಲಿ ಭದ್ರಾವತಿಯಲ್ಲಿ ಕಬ್ಬಿಣ ಕೈಗಾರಿಕೆ, ಸಿಮೆಂಟ್ ಕೈಗಾರಿಕೆ, ಬೆಂಗಳೂರಿನಲ್ಲಿ ಸಾಬೂನು ಮತ್ತು ಗಂಧದೆಣ್ಣೆ ಕೈಗಾರಿಕೆ, ಖಾದಿ ಉದ್ಯಮ, ಕಾಗದದ ಕೈಗಾರಿಕೆಗಳನ್ನು ಸ್ಥಾಪಿಸಿದರು. ಮಿರ್ಜಾ ಇಸ್ಮಾಯಿಲ್ಲರು ಮಂಡ್ಯದಲ್ಲಿ ಸಕ್ಕರೆ ಕೈಗಾರಿಕೆ, ಭದ್ರಾವತಿಯಲ್ಲಿ ಕಾಗದದ ಕೈಗಾರಿಕೆ, ಹಲವೆಡೆ ಗೃಹಕೈಗಾರಿಕೆಗಳ ಸ್ಥಾಪನೆಗೆ ಕಾರಣರಾದರು.

ಹದಿನಾರನೇ ಶತಮಾನದಲ್ಲಿ ಗೋವೆಯ ಮೂಲಕ ಮುದ್ರಣ ಯಂತ್ರವು ಭಾರತವನ್ನು ಪ್ರವೇಶಿಸಿತು. ಮುದ್ರಣ ಯಂತ್ರದ ತಂತ್ರಜ್ಞಾನವು ಭಾರತೀಯರಿಗೆ ಕರಗತವಾಗುತ್ತಿದ್ದಂತೆ ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಮಹತ್ತರ ಬದಲಾವಣೆಗಳು ರೂಪುಗೊಂಡವು ಭಾರತದ ಮೊದಲ ವರ್ತಮಾನ ಪತ್ರಿಕೆ 'ದಿ. ಬೆಂಗಾಲ್ ಗೆಜೆಟ್' ೧೭೮೦ರಲ್ಲಿ ಕಲ್ಕತ್ತಾದಿಂದ ಪ್ರಕಟಗೊಂಡಿತು. ತರುವಾಯ ಇಂಗ್ಲಿಷ್ ಮತ್ತು ಹಲವು ದೇಶೀಯ ಭಾಷೆಗಳಲ್ಲಿ ಬಹಳಷ್ಟು ಪತ್ರಿಕೆಗಳು ಪ್ರಕಟಗೊಳ್ಳುವ ಮೂಲಕ ಪತ್ರಿಕೋದ್ಯಮವು ವ್ಯಾಪಕವಾಗಿ ಬೆಳೆಯಿತು. ಇಂಡಿಯನ್ ಬಜಾರ್, ಬಾಂಬೆ ಕ್ರಾನಿಕಲ್, ಮರಾಠ, ಕೇಸರಿ, ದಿ ಹಿಂದು, ಸುಧಾಕರ, ಇಂದು ಪ್ರಕಾಶ, ಸುಬೋಧ ಪತ್ರಿಕೆ ಮುಂತಾದವು ಪ್ರಕಟವಾದವು.

ಕರ್ನಾಟಕದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ಪ್ರಥಮ ಬಾರಿಗೆ ೧೮೪೭ರಲ್ಲಿ ಪ್ರಕಟವಾಯಿತು. ಬಾಸೆಲ್ ಮಿಷನ್‌ನ ಹರ್ಮನ್ ಮೋಗ್ಲಿಂಗ್ ಈ ಪತ್ರಿಕೆಯನ್ನು ಹೊರತಂದರು. ನಂತರ ಮೈಸೂರು, ಬಳ್ಳಾರಿ, ಧಾರವಾಡ, ಬೆಂಗಳೂರು, ಮಂಗಳೂರುಗಳಲ್ಲಿ ಹಲವಾರು ಪತ್ರಿಕೆಗಳು ಹೊರ ಹೊಮ್ಮಿದವು. ಮೈಸೂರು ರೆಕಾರ್ಡರ್ ಕರ್ಮವೀರ, ಕರ್ನಾಟಕ ಪ್ರಕಾಶಿಕ, ಮೈಸೂರು ವೃತ್ತಾಂತ ಬೋಧಿನಿ ಮುಂತಾದ ಪತ್ರಿಕೆಗಳು ಕರ್ನಾಟಕದಾದ್ಯಂತ ಪ್ರಸಾರಗೊಂಡು ದೇಶದ ಸಮಕಾಲೀನ ವಿದ್ಯಮಾನಗಳನ್ನು ಜಗತ್ತಿಗೆ ಮುಟ್ಟಿಸಿದವು. ಕರ್ನಾಟಕದ ಪ್ರಮುಖ ಆಡಳಿತ ಕೇಂದ್ರಗಳಲ್ಲಿದ್ದ ಮುದ್ರಣ ಯಂತ್ರಗಳು ತಮ್ಮ

ವ್ಯಾಪ್ತಿಯನ್ನು ವಿಸ್ತರಿಸಿಕೊಂಡವು. ಇದರಿಂದ ರಾಷ್ಟ್ರೀಯ ಚಳುವಳಿಯ ತುಡಿತಗಳು ಸಾಹಿತ್ಯದ ರೂಪದಲ್ಲಿ ಅಭಿವ್ಯಕ್ತಿಯಾಗಲು ಸಾಧ್ಯವಾಯಿತು. ಕಥೆ, ಕವನ, ವಿಚಾರ, ಗದ್ಯ, ವಿಮರ್ಶೆ, ಟೀಕೆ, ಟಿಪ್ಪಣಿಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡು ಅವು ಪುಸ್ತಕರೂಪತಾಳಿದವು ಕೈಗಾರಿಕಾ ಕ್ರಾಂತಿಯಿಂದಾಗಿ ಸಾರಿಗೆ-ಸಂಪರ್ಕ, ಮುದ್ರಣಯಂತ್ರ, ವಿಜ್ಞಾನ-ತಂತ್ರಜ್ಞಾನ ಪತ್ರಿಕೋದ್ಯಮ ಮುಂತಾದವು ಕನ್ನಡ ಕಾವ್ಯಕ್ಷೇತ್ರದ ಮೇಲೆ ನಿಚ್ಚಳವಾಗಿ ಪ್ರಭಾವ ಬೀರಿವೆ.

**೪. ಪಾಶ್ಚಿಮಾತ್ಯ ಸಾಹಿತ್ಯ**

ಹೊಸಗನ್ನಡ ಸಾಹಿತ್ಯದ ಕಾರಕ ಹಾಗೂ ಪ್ರೇರಕ ಶಕ್ತಿಯಾಗಿ ಇಂಗ್ಲಿಷ್ ಸಾಹಿತ್ಯ ಕೆಲಸ ಮಾಡಿದೆ. ಇದು "ಆಧುನಿಕ ಕನ್ನಡ ಸಾಹಿತ್ಯಕ್ಕೆ ಪ್ರಾಣದಾಯಕವಾಗಿದೆ"[೯] ಎಂಬ ಎ.ಆರ್.ಕೃ. ಅವರ ಅಭಿಪ್ರಾಯವು ಅರ್ಥಪೂರ್ಣವಾದುದು. ಕ್ರೈಸ್ತ ಮಿಷನರಿಗಳಲ್ಲಿ ಕೆಲಸ ಮಾಡುತ್ತಿದ್ದ ಕಿಟೆಲ್, ವಾಲ್ಟರ್ ಎಲಿಯಟ್, ಫ್ಲೀಟ್, ರಸೆಲ್, ಬಿ.ಎಲ್.ರೈಸ್, ಜಾನ್ ಮೆಕೆರಲ್, ಫಿಲಿಪ್ ಟೇಲರ್, ಮೆಕೆಂಝಿ, ಬುಕನನ್ ಮುಂತಾದವರು ಕನ್ನಡ ಭಾಷೆಗೆ ಅಗತ್ಯವಾಗಿ ಬೇಕಾದ ನಿಘಂಟು, ವ್ಯಾಕರಣ ಗ್ರಂಥಗಳನ್ನು ರೂಪಿಸಿದರು. ಹಾಗೆಯೇ ಇತಿಹಾಸ, ಶಾಸನ, ಜನಪದ, ಗಾದೆ, ಒಗಟು, ಮುಂತಾದವುಗಳನ್ನು ಶೋಧಿಸಿ ಸಂಗ್ರಹಿಸಿ ಸಂಪಾದಿಸಿಕೊಟ್ಟರು.

ಆಂಗ್ಲಶಿಕ್ಷಣವನ್ನು ಪಡೆದು, ಯುರೋಪಿನ ವಿಚಾರಧಾರೆಗಳನ್ನು ಅಭಿವ್ಯಕ್ತಿಪಡಿಸಲು ತುಡಿಯುತ್ತಿದ್ದ ಯುವಪಡೆಯೊಂದಕ್ಕೆ ಸಾಹಿತ್ಯ ಆಸಕ್ತಿಯ ಕ್ಷೇತ್ರವಾಯಿತು. ಇಂಗ್ಲಿಷ್ ಭಾಷೆಯ ಮೂಲಕ ಗ್ರೀಕ್, ಲ್ಯಾಟಿನ್, ಫ್ರೆಂಚ್, ಜರ್ಮನ್, ಇಟಾಲಿಯನ್, ರಷ್ಯನ್ ಸಾಹಿತ್ಯವೂ ಪರಿಚಯವಾಯಿತು. ಹೋಮರ್, ವರ್ಜಿಲ್, ಡಾಂಟೆ, ಷೇಕ್ಸ್‌ಪಿಯರ್ ಮಿಲ್ಟನ್, ಶೆಲ್ಲಿ, ಕೀಟ್ಸ್, ಗಾರ್ಕಿ, ಗಿಬ್ಬನ್, ಹೆಗಲ್, ಕಾಂಟ್, ವಾಲ್ಟೇರ್, ರಸ್ಸೋ, ಬರ್ನಾರ್ಡ್‌ಷಾ, ಟಾಲ್‌ಸ್ಟಾಯ್ ಮುಂತಾದ ಪ್ರಮುಖರ ಸಾಹಿತ್ಯ ಕೃತಿಗಳು ಹಾಗೂ ವಿಚಾರ ಧಾರೆಗಳು ಮುದ್ರಣಗೊಂಡು ಸುಲಭವಾಗಿ ಸಾಮಾನ್ಯ ವಿದ್ಯಾವಂತನ ಕೈ ಸೇರಿದವು. ಪಾಶ್ಚಿಮಾತ್ಯ ವಿಚಾರಧಾರೆಗಳು ಸುಪ್ತವಾಗಿದ್ದ ಕನ್ನಡ ಕವಿಮನಸ್ಸನ್ನು ಜಾಗೃತಗೊಳಿಸಿದ ಪರಿಣಾಮವಾಗಿ ಕನ್ನಡ ಕಾವ್ಯಸುಧೆಯು "ಇಂಗ್ಲಿಷ್ ಸಾಹಿತ್ಯ ದೃಷ್ಟಿಯಿಂದ ಹೆಚ್ಚು ಹೊಳೆಯಾಗಿ ಮೊರೆಯುತ್ತ ಬಂಡೆಗಳ ನಡುವೆ ನೂರು ಕವಲಾಗಿ ಒಡೆಯುತ್ತಾ ಜನ್ಮಭೂಮಿಯ ಘಟ್ಟಗಳನ್ನು ತೊರೆದು ದಿವ್ಯವೇಗದೊಡನೆ ಕೆಳಗೆ ಧುಮುಕಿ ಸ್ವತಂತ್ರವಾಗಿ ವಿಸ್ತಾರವಾಗಿ ಬಯಲು ನಾಡಿನಲ್ಲಿ ಸಮೃದ್ಧಿಯನ್ನು ಪಡೆಯಿತು."[೭]

ಹೊಸಗನ್ನಡದ ಆರಂಭಕಾಲದಲ್ಲಿ ರಚನೆಯಾದ ಕಾವ್ಯವು ಬಹುಪಾಲು ಇಂಗ್ಲಿಷ್ ಕಾವ್ಯವನ್ನೆ ಪ್ರತಿಬಿಂಬಿಸುತ್ತದೆ. ಹಾಮಾನಾ ಅವರು ಹೇಳುವಂತೆ "ಹೊಸಗನ್ನಡ ಉದಯಕಾಲದ ಸಾಹಿತ್ಯ ನಾವೆಲ್ಲರೂ ತಿಳಿದಿರುವ ಹಾಗೆ ಪ್ರಧಾನವಾಗಿ ಅನುವಾದ ಸಾಹಿತ್ಯ"[೮] ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತೆಗಳು', ಹಟ್ಟಿಯಂಗಡಿ ನಾರಾಯಣರಾಯರ 'ಆಂಗ್ಲಕವಿತಾವಳಿ' ಬಸಪ್ಪ ಶಾಸ್ತ್ರಿಗಳ 'ಶೂರ ಸೇನ ಚರಿತೆ', ಎಂ.ಎಲ್.ಶ್ರೀಕಂಠೇಶಗೌಡರ ಅನುವಾದ ನಾಟಕಗಳು. ಎಂ.ಎಸ್.ಪುಟ್ಟಣ್ಣರ 'ಹೇಮಲತ, ಕಿಂಗಲ್‌ಲಿಯರ್, ಜಯಸಿಂಹರಾಜ ಮುಂತಾದ ಕೃತಿಗಳಲ್ಲಿ ಸಂಪೂರ್ಣವಾಗಿ ಅನುವಾದವನ್ನೆ ಕಾಣಲು

ಸಾಧ್ಯವಿದೆ. ಕೆಲವೆಡೆ ಅನುವಾದಗಳು ಸರಳವಾಗಿದ್ದರೆ ಕೆಲವು ಕಠಿಣವಾಗಿದ್ದು. ಮೂಲಾರ್ಥವನ್ನು ಪ್ರತಿಬಿಂಬಿಸುವಲ್ಲಿ ವಿಫಲವಾಗುತ್ತವೆ. ವರ್ಡ್ಸ್‌ವರ್ತ್ ಕವಿಯ 'To The Cukoo' ಎಂಬ ಪದ್ಯವನ್ನು ಸರಳವಾಗಿ ಅನುವಾದಿಸಿರುವುದನ್ನು ಇಲ್ಲಿ ನೋಡಬಹುದು.

"ಬಾರೊ ಬಸಂತದ ಕಂದ ಬಾ ಬಾ ಬಾರೊ

ಹಾರುವ ಹಕ್ಕಿ ನೀನಲ್ಲ

ಸಾರುವ ದನಿ ಮಾಯದ ಗಂಟು ಕಣ್ಣಿಗೆ

ತೋರದ ಹುರುಳಾಗಿ ಸುಳಿವೆ"

Thrice welcome, darling of the pringl

Even yet thou art to me

No bird, but and invisible thing

A voice, a mystery"[೯]

ಈ ಪದ್ಯದ ಅನುವಾದವು ತೀರಾ ಸರಳವಾಗಿದ್ದು ಸಾಂಗತ್ಯ ಛಂದಸ್ಸಿನಲ್ಲಿ ಹೊಸಗನ್ನಡ ಭಾಷೆಯಲ್ಲಿ ರೂಪುಗೊಂಡಿದೆ. ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಸಂಸ್ಕೃತವು ಗೊಬ್ಬರ ಹಾಕಿ ನೀರೆರೆದು ಪೋಷಣೆ ಮಾಡಿದಂತೆ ಆಧುನಿಕ ಕನ್ನಡ ಸಾಹಿತ್ಯಕ್ಕೆ ಇಂಗ್ಲಿಷ್ ಸಾಹಿತ್ಯವು ಗೊಬ್ಬರ ಹಾಕಿ ನೀರೆರೆದು ಪೋಷಿಸಿದೆ. ಕನ್ನಡ ಕಾವ್ಯವು ಆಧುನಿಕ ಸಂಪರ್ಕಗಳಿಂದಾಗಿ ಹೊಸ ಮಗ್ಗುಲುಗಳಿಗೆ ಹೊರಳಿತು. ಧರ್ಮ ರಾಜಾಶ್ರಯಗಳನ್ನು ತ್ಯಜಿಸಿ ಸ್ವತಂತ್ರವಾಗಿ ಸ್ವಾಭಿಮಾನಿಯಾಗಿ ಸಮಕಾಲೀನ ವಿದ್ಯಮಾನಗಳನ್ನೇ ಕಾವ್ಯವಸ್ತುವನ್ನಾಗಿಸಿಕೊಂಡು ಅಭಿವ್ಯಕ್ತಪಡಿಸುವಲ್ಲಿ ಕವಿ ಮನಸ್ಸು ದಿಟ್ಟತನ ತೋರಿತು.

**೫. ರಾಷ್ಟ್ರೀಯ ಪುನರುಜ್ಜೀವನ**

ಆಧುನಿಕ ಭಾರತದ ಇತಿಹಾಸದಲ್ಲಿ ೧೯ನೇ ಶತಮಾನವನ್ನು ಭಾರತೀಯ ಪುನರುಜ್ಜೀವನ ಕಾಲವೆಂದು ಕರೆಯಲಾಗಿದೆ. ಬ್ರಿಟಿಷ್ ಆಡಳಿತ, ಶಿಕ್ಷಣ, ಸಾಹಿತ್ಯ, ಸಂಪರ್ಕ, ಮುದ್ರಣಯಂತ್ರದ ಬಳಕೆ ಮುಂತಾದ ಕಾರಣಗಳು ಭಾರತೀಯರನ್ನು ಆತ್ಮ ಪರೀಕ್ಷೆಗೆ ಒಳಪಡಿಸಿದವು. ಇಂಗ್ಲೀಷ್ ವಿದ್ಯಾಭ್ಯಾಸ ಮತ್ತು ಸಾಹಿತ್ಯ ಪರಿಚಯದ ಮೂಲಕ ದೊರೆತ ಪಾಶ್ಚಿಮಾತ್ಯ ವೈಚಾರಿಕತೆ ಭಾರತದಲ್ಲಿದ್ದ ಮೂಢನಂಬಿಕೆಗಳನ್ನು ಪ್ರಶ್ನಿಸಲು ಸಹಾಯವಾಯಿತು. ಪಾಶ್ಚಿಮಾತ್ಯ ಪರಿಕಲ್ಪನೆಯ ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಸಮಾನತೆ, ರಾಷ್ಟ್ರೀಯತೆ, ಮುಂತಾದ ವಿಚಾರಗಳು ಭಾರತೀಯರನ್ನು ಎಚ್ಚರಗೊಳಿಸಿದವು. ರಾಜಾರಾಂ ಮೋಹನರಾಯ್, ದಯಾನಂದ ಸರಸ್ವತಿ, ಎಂ.ಜಿ.ರಾನಡೆ, ಜ್ಯೋತಿ ಬಾ ಫುಲೆ, ಆನಿಬೆಸೆಂಟ್ ಮುಂತಾದವರು ಭಾರತದ ರಾಷ್ಟ್ರೀಯ ಪುನರುತ್ಥಾನಕ್ಕೆ ಶ್ರಮಿಸಿದರು. ಇಂಗ್ಲಿಷ್ ಶಿಕ್ಷಣ, ಆಧುನಿಕ ವಿಜ್ಞಾನದ

ಅವಶ್ಯಕತೆಯನ್ನು ಪ್ರತಿಪಾದಿಸಿದರು. ಜಾತೀಯತೆ, ಸ್ತ್ರೀಶೋಷಣೆ, ಬಾಲ್ಯವಿವಾಹ, ಬಹುಪತ್ನಿತ್ವ ಮೂಢನಂಬಿಕೆ, ಅಸ್ಪೃಶ್ಯತೆ, ವಿಗ್ರಹಾರಾಧನೆಗಳನ್ನು ವಿರೋಧಿಸಿದರು. ವಿಧವೆಯರ ಪುನರ್‌ವಿವಾಹ, ಸ್ತ್ರೀ ಶಿಕ್ಷಣ, ಸಹಭೋಜನ, ಅಸ್ಪೃಶ್ಯರ ಉದ್ಧಾರ, ಸ್ತ್ರೀವಿಮೋಚನೆ. ಅಂತರ ಜಾತಿ ವಿವಾಹ, ಮುಂತಾದವುಗಳನ್ನು ಬೆಂಬಲಿಸಿ ಅವುಗಳ ಅನುಷ್ಠಾನಕ್ಕಾಗಿ, ಅನಾಥಾಲಯಗಳು,ಶಾಲಾ ಕಾಲೇಜುಗಳು, ನಿರಾಶ್ರಿತರ ಪುನರ್‌ವಸತಿ ಕೇಂದ್ರಗಳು, ರಾಷ್ಟ್ರೀಯ ಶಾಲೆಗಳನ್ನು ಸ್ಥಾಪಿಸಿದರು. ಭಾರತೀಯ ತತ್ವಶಾಸ್ತ್ರ ಮೌಲ್ಯಗಳಾದ ಸಮಾನತೆ ಸಹೋದರಗಳನ್ನು ಜನತೆಯಲ್ಲಿ ಬೆಳೆಸಿದರು. ಭಾರತದ ಪಾರಂಪರಿಕ ತತ್ವಜ್ಞಾನದ ಜೊತೆ ಕಲೆ, ವಾಸ್ತುಶಿಲ್ಪ ಸಂಗೀತ ನೃತ್ಯಗಳ ಪುನರುಜ್ಜೀವನಕ್ಕೆ ಶ್ರಮಿಸಿದರು.

ಕನ್ನಡ ನಾಡಿನಲ್ಲಿದ್ದ ಬುದ್ಧಿಜೀವಿಗಳು, ಸಾಮಾಜಿಕ ಮತ್ತು ಸಾಂಸ್ಕೃತಿಕ ಕಳಕಳಿಯುಳ್ಳ ಚಿಂತಕರ ಮೇಲೆ ರಾಷ್ಟ್ರೀಯ ಪುನರುಜ್ಜೀವನದ ಛಾಯೆ ನಿಚ್ಚಳವಾಗಿ ಉಂಟಾಯಿತು. "ಆ ಮತದ ಈ ಮತದ ಹಳೆಮತದ ಸಹವಾಸ ಸಾಕಿನ್ನು ಸೇರಿರೈ ಮನುಜಮತಕೆ" ಎಂಬ ಘೋಷಣೆ ಮೊಳಗತೊಡಗಿತು. 'ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು' ಎಂಬ ಮಾತು ಕನ್ನಡ ನಾಡಿನಾದ್ಯಂತ ಮೊಳಗಿ ಜನರನ್ನು ಜಾಗೃತರನ್ನಾಗಿಸಿತು. ಭಾರತವನ್ನು, ಕರ್ನಾಟಕವನ್ನು ಕುರಿತು ಅದರ ಹಿರಿಮೆ-ಗರಿಮೆಗಳನ್ನು, ಸಾಂಸ್ಕೃತಿಕ ಮಹತ್ವವನ್ನು ತಮ್ಮ ಕಾವ್ಯಗಳಿಗೆ ವಸ್ತುವನ್ನಾಗಿಸಿಕೊಂಡು ಬೃಹತ್ ಕಾವ್ಯಪರಂರೆಗೆ ಅಡಿಗಲ್ಲನ್ನು ಒದಗಿಸಲಾಯಿತು. ನಾಡು, ನುಡಿಯ ಬಗ್ಗೆ ಹೆಮ್ಮೆ, ಸ್ವಾಭಿಮಾನ, ಸ್ವಾವಲಂಬನೆ, ಸ್ವಾತಂತ್ರ್ಯ ಸಮಾನತೆಗಾಗಿ ಕನ್ನಡ ಕವಿಗಳು ತುಡಿಯತೊಡಗಿದರು.

**೭. ರಾಷ್ಟ್ರೀಯ ಹೋರಾಟದ ಅಬ್ಬರ**

ಬ್ರಿಟಿಷ್ ಸರ್ಕಾರವು ಭಾರತದ ಆಡಳಿತವನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿತ್ತು. ತನ್ನ ವಸಾಹತುಕೇಂದ್ರವನ್ನಾಗಿ ಮಾಡಿಕೊಂಡು ಭಾರತವು ಕಚ್ಚಾವಸ್ತುಗಳನ್ನು ಪೂರೈಸುವ ಮತ್ತು ಸಿದ್ಧವಸ್ತುಗಳನ್ನು ಕೊಳ್ಳುವ ಕೇಂದ್ರವಾಗುವಂತೆ ಮಾಡಿ ಇಲ್ಲಿನ ಅಪಾರ ಸಂಪತ್ತನ್ನು ಕೊಳ್ಳೆಹೊಡೆಯತೊಡಗಿದರು. ಭಾರತವು ಇಂಗ್ಲೆಂಡಿಗೆ ಹಾಲುಕೊಡುವ ಹಸುವಾಗಿ ಪರಿಣಮಿಸಿತು. ಕೊಡಲಿಯ ಕಾವು ಕುಲಕ್ಕೆ ಮೂಲ ಎಂಬಂತೆ ಬ್ರಿಟಿಷರು ನೀಡಿದ ಶಿಕ್ಷಣ, ರಾಜಕೀಯ ಒಳಸುಳಿಗಳು, ವೈಚಾರಿಕ ಮನೋಭಾವಗಳು ಅವರಿಗೇ ತಿರುಗುಬಾಣವಾಗಿ ಭಾರತೀಯರಿಗೆ ವರಪ್ರಸಾದವಾಗಿ ರೂಪುಗೊಂಡವು. ಎಂ.ಜಿ.ರಾನಡೆ, ಸುರೇಂದ್ರನಾಥಬ್ಯಾನರ್ಜಿ, ದಾದಾಬಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ, ಬದ್ರುದ್ದೀನ್ ತ್ಯಾಬ್ಜಿ, ಅರಬಿಂದೋಘೋಷ್, ಬಿಪಿನ್ ಚಂದ್ರಪಾಲ್, ಲಾಲಾ ಲಜಪತ್‌ರಾಯ್, ಬಾಲಗಂಗಾಧರ ತಿಲಕ್ ಮುಂತಾದವರು ಬ್ರಿಟಿಷರ ವಿರುದ್ಧ ಭಾರತದ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರವ್ಯಾಪಿ ಸಂಚರಿಸಿ ಜನರನ್ನು ಜಾಗೃತಗೊಳಿಸಿದರು. ಪತ್ರಿಕೆಗಳ ಮೂಲಕ ತಮ್ಮ ವಿಚಾರಧಾರೆಗಳನ್ನು ಪ್ರಕಟಪಡಿಸಿದರು.

ಕರ್ನಾಟಕದಲ್ಲಿಯೂ ರಾಷ್ಟ್ರೀಯ ಹೋರಾಟದ ಕಿಚ್ಚನ್ನು ಹಚ್ಚಲಾಯಿತು. ರಾಷ್ಟ್ರೀಯತೆಯನ್ನುಂಟು ಮಾಡುವಂತಹ ಕಾವ್ಯರಚನೆಯ ಕಾರ್ಯ ವೃದ್ಧಿಸತೊಡಗಿತು. ಗೋವಿಂದ ಪೈ, ಆಲೂರು ವೆಂಕಟರಾಯರು, ಹುಯಿಲಗೋಳ ನಾರಾಯಣರಾಯರು, ಬಿ.ಎಂ.ಶ್ರೀ., ಕಾರ್ನಾಡ್

ಸದಾಶಿವರಾವ್, ಗಂಗಾಧರರಾವ್ ದೇಶಪಾಂಡೆ, ಶಾಂತಕವಿಗಳು, ಆರ್.ನರಸಿಂಹಾಚಾರ್ಯರು, ಪಂಜೆ ಮಂಗೇಶರಾಯರು, ಬಿ.ವೆಂಕಟಚಾರ್ಯರು, ಕುವೆಂಪು ಮುಂತಾದವರು ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕದ ಏಕೀಕರಣಕ್ಕಾಗಿ ಪಣತೊಟ್ಟು ಜನತೆಯಲ್ಲಿ ಎಚ್ಚರವನ್ನುಂಟು ಮಾಡಿದರು.

'ಭಾರತವನುಳಿಯುತ್ತ ನನಗೆ ಜೀವನವೆತ್ತ
ಭಾರತವೆ ನನ್ನುಸಿರು ನನ್ನೊಗೆದ ಬಸಿರು
ಭಾರತವೆ ಧನಧಾನ್ಯ, ಭಾರತವೆ ಮನೆಮಾನ್ಯ
ಭಾರತವೆ ದೇವಾರವೆನ್ನ ಸಂಸಾರ'[೧೦]

ಎಂದು ಗೋವಿಂದಪೈ ತಮ್ಮ ಮನದಾಳದಿಂಗಿತವನ್ನು ಭಾರತದ ಬಗ್ಗೆ ವ್ಯಕ್ತಪಡಿಸಿದ್ದಾರೆ. ಅವರೇ ಕನ್ನಡ ತಾಯಿಯ ಬಗ್ಗೆ ಗೌರವವನ್ನು ಇಟ್ಟುಕೊಂಡು ವಿನಮ್ರತೆಯಿಂದ ದರ್ಶನಕ್ಕಾಗಿ ಆಹ್ವಾನಿಸುವ ಪದ್ಯ ಕೆಳಕಂಡಂತಿದೆ.

"ತಾಯಿ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ, ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮ ದಾತೆಯೆ!

ನಮ್ಮ ತಪ್ಪನೆನಿತೊ ತಾಳ್ವೆ
ಅಕ್ಕರೆಯಿಂದೆಮ್ಮನಾಳೆ
ನೀನೆ ಕಣಾ ನಮ್ಮ ಬಾಳ್ವೆ
ನಿನ್ನ ಮರೆಯಲಮ್ಮೆವು
ತನು ಕನ್ನಡ, ಮನಕನ್ನಡ, ಧನಕನ್ನಡವೆಮ್ಮವು"[೧೧]

ಎನ್ನುವ ಮೂಲಕ ಸಕಲ ಸಂಪತ್ತೆಲ್ಲವೂ ಕನ್ನಡ ಎಂದು ತಮ್ಮನ್ನು ಕನ್ನಡ ತಾಯಿಗೆ ಅರ್ಪಿಸಿಕೊಳ್ಳುತ್ತಾರೆ. ಇದು ಒಬ್ಬ ಕವಿಯ ಮಾತಷ್ಟೇ ಅಲ್ಲ ಅಖಂಡ ಕನ್ನಡಿಗರ ಮತ್ತು ಭಾರತೀಯರ ಮನಗಳ ಪ್ರತಿನಿಧಿಯಾಗಿ ಪೈ ಅವರ ಮನವು ತನ್ನ ತುಡಿತವನ್ನು ವ್ಯಕ್ತಪಡಿಸಿದೆ.

ಕರ್ನಾಟಕದಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಸಭಾ, ಕರ್ನಾಟಕ ಏಕೀಕರಣ ಸಭಾ, ಪ್ರದೇಶ ಕಾಂಗ್ರೆಸ್ ಸಮಿತಿ, ಮುಂತಾದ ಒಕ್ಕೂಟಗಳೂ ಕೂಡ ಕನ್ನಡ ಕಾವ್ಯಪರಂಪರೆ ಬೆಳೆಯಲು ಪೋಷಕಗಳಾಗಿವೆ. ಆಲೂರು ವೆಂಕಟರಾಯರು ಕರ್ನಾಟಕ ಗತವೈಭವ, ಕರ್ನಾಟಕ ವಿಕಾಸ ಮುಂತಾದ ಕೃತಿಗಳ ಮೂಲಕ ಕನ್ನಡ ನಾಡಿನ ಎತ್ತರ ಬಿತ್ತರಗಳನ್ನು ಅನಾವರಣಗೊಳಿಸಿದರು. ಹುಯಿಲಗೋಳ ನಾರಾಯಣರಾಯರು ಅಖಂಡ ಕನ್ನಡ ನಾಡಿನ ಉದಯಕ್ಕಾಗಿ

ಕರೆಕೊಡುತ್ತಾ

ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು

ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು"

ಎಂದು ಹಾಡಿದ್ದಾರೆ.

ಒಟ್ಟಾರೆಯಾಗಿ ಬ್ರಿಟಿಷರ ಆಧುನಿಕ, ಸವ್ಯವಸ್ಥಿತ, ಆಡಳಿತ ಪದ್ಧತಿಯಿಂದಾಗಿ ದೇಶೀಯ ಪಾಳೆಗಾರಿಕೆ ಪದ್ಧತಿ ಕೊನೆಗೊಂಡು ಜನರು ರಾಜಾಡಳಿತದ ಕಪಿಮುಷ್ಠಿಯಿಂದ ಬಿಡುಗಡೆಯಾದರು. ಇಂಗ್ಲಿಷ್ ಶಿಕ್ಷಣ ವ್ಯವಸ್ಥೆಯು ಎಲ್ಲಾ ವರ್ಗದ ಪ್ರತಿಭಾವಂತರಿಗೆ ಮುಕ್ತ ಅವಕಾಶವನ್ನು ಕಲ್ಪಿಸಿತು. ಪಾಶ್ಚಾತ್ಯ ಸಾಹಿತ್ಯ ದರ್ಶನದಿಂದ ಪಾಶ್ಯಾತ್ಯ ವಿಚಾರಧಾರೆಗಳು ಭಾರತೀಯರ ಮನಸ್ಸನ್ನು ತಲ್ಲಣಗೊಳಿಸಿದವು. ವೈಚಾರಿಕ ಮನೋಭಾವ, ಅಂತರಾತ್ಮದ ಅಭಿವ್ಯಕ್ತಿ, ಸ್ವಾತಂತ್ರ್ಯ ಪಡೆಯುವ ತುಯ್ತಗಳು ಹೆಚ್ಚತೊಡಗಿದವು. ಮುದ್ರಣಯಂತ್ರದ ಪ್ರಯೋಜನವನ್ನು ಸಮರ್ಥವಾಗಿ ಬಳಸಿಕೊಂಡದ್ದು, ಶೈಕ್ಷಣಿಕ ರಾಜಕೀಯ, ಸಾಮಾಜಿಕ, ಧಾರ್ಮಿಕ ಆಂದೋಲನಕ್ಕೆ ಅವಕಾಶ ಒದಗಿಬಂತು. ಇದರಿಂದ ಮಧ್ಯಮವರ್ಗದ ಉದಯವಾಗಿ ಪರಂಪರಾಗತ ವ್ಯವಸ್ಥೆಯನ್ನು ಪಲ್ಲಟಗೊಳಿಸಿತು. ಈ ಎಲ್ಲಾ ಬೆಳವಣಿಗೆಗಳನ್ನು ಸಂವೇದನಾ ಶೀಲತೆಯಿಂದ ಅವಲೋಕಿಸುತ್ತಿದ್ದ ಸೃಜನ ಶೀಲ ಬರಹಗಾರನು ತನ್ನ ಅನುಭವಬುತ್ತಿಯನ್ನು ಸಾಮಾನ್ಯರಿಗೆ ಸಾಹಿತ್ಯದ ಮೂಲಕ ಬಿಚ್ಚಿಟ್ಟನು. ಹೊಸಗನ್ನಡ ಸಾಹಿತ್ಯವು ಹಂತಹಂತವಾಗಿ ಬೆಳವಣಿಗೆ ಹೊಂದಿ ಹೆಮ್ಮರವಾಗಿ ಬೆಳೆದು ನಿಲ್ಲಲು ಮೇಲಿನ ಎಲ್ಲ ಅಂಶಗಳು ಕಾರಕ ಮತ್ತು ಪ್ರೇರಕಗಳಾಗಿವೆ.



## ಅಡಿಟಿಪ್ಪಣಿ

೧. ಡಾ||ಎಡ್ವರ್ಡ್‌ನೊರೋನ, ಕನ್ನಡ ಧಾರ್ಮಿಕ ಸಾಹಿತ್ಯಕ್ಕೆ ಕ್ರೈಸ್ತಮಿಷನರಿಗಳ ಕೊಡುಗೆ, ಬೆನ್ನುಡಿಯಿಂದ.

೨. ಜಿ.ಎಸ್.ಶಿವರುದ್ರಪ್ಪ, ಕನ್ನಡ ಸಾಹಿತ್ಯ ಸಮೀಕ್ಷೆ, ಪುಟ ೪೪.

೩. ಶ್ರೀನಿವಾಸ ಹಾವನೂರ, ಹೊಸಗನ್ನಡದ ಅರುಣೋದಯ, ಪುಟ ೬೬.

೪. ಅದೇ, ಪುಟ ೭೫.

೫. ಕನ್ನಡ ಸಾಹಿತ್ಯ ಚರಿತ್ರೆ, ಮೈ.ವಿ.ವಿ., ಪುಟ ೭೩೦.

೬. ಅದೇ, ಪುಟ ೭೨೯.

೭. ಬಿ.ಎಂ.ಶ್ರೀ., ಕನ್ನಡ ಕೈಪಿಡಿ, ಸಂ.೨, ಪುಟ-೪೬೯.

೮. ಡಾ|| ಎಡ್ವರ್ಡ್‌ನೊರೋನ, ಕನ್ನಡ ಧಾರ್ಮಿಕ ಸಾಹಿತ್ಯಕ್ಕೆ ಕ್ರೈಸ್ತ, ಮಿಷನರಿಗಳ ಕೊಡುಗೆ, ಬೆನ್ನುಡಿಯಿಂದ.

೯. ಬಿ.ಎಂ.ಶ್ರೀ., ಇಂಗ್ಲಿಷ್ ಗೀತೆಗಳು, ಪ್ರಸ್ತಾವನೆ, ಪುಟ xviii.

೧೦. ಗೋವಿಂದ ಪೈ, ಹೃದಯರಂಗ, ಪದ್ಯ-ಭಾರತಾಂಬೆಯ ಮಹಿಮೆ.

೧೧. ಗೋವಿಂದ ಪೈ, ಗಿಳಿವಿಂಡು ಪದ್ಯ-ಕನ್ನಡಿಗರ ತಾಯಿ.

## ಹೊಸಗನ್ನಡ ಕಾವ್ಯ ನಿರ್ಮಾಣದಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರ

ಕ್ರೈಸ್ತ ಮಿಷನರಿಗಳು ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿವೆ. ಇಂಗ್ಲಿಷ್ ಶಿಕ್ಷಣ, ವೈಚಾರಿಕ ಪ್ರವೃತ್ತಿ, ವ್ಯಾವಹಾರಿಕ ಮತ್ತು ಲೌಕಿಕ ಮನೋಧರ್ಮ ಸ್ವಾಭಿಮಾನ, ಸ್ವತಂತ್ರ ವಿಚಾರಸರಣಿ, ಬರಹಗಾರ ಮತ್ತು ವಾಚಕವರ್ಗದ ಸೃಷ್ಟಿ, ಹೊಸ ಬಗೆಯ ಸಾಹಿತ್ಯದ ಸೃಷ್ಟಿ, ಮುಂತಾದ ಬೆಳವಣಿಗೆಗಳ ಹಿಂದೆ ಕ್ರೈಸ್ತ ಮಿಷನರಿಗಳ ಅವಿರತ ದುಡಿಮೆಯ ತುಡಿತ ಎದ್ದು ಕಾಣುತ್ತದೆ. ಆದ್ದರಿಂದ "ಹೊಸಗನ್ನಡ ಸಾಹಿತ್ಯಕ್ಕೆ ಹಾಗೂ ಕರ್ನಾಟಕದ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ತಳಹದಿ ಹಾಕಿದವರು ಕ್ರೈಸ್ತ ಮಿಷನರಿಗಳು"[೧] ಎಂದು ಹೇಳಿದರೆ ತಪ್ಪಾಗಲಾರದು. ಬ್ರಿಟಿಷ್ ಅಧಿಕಾರಿಗಳು ಮತ್ತು ಮಿಷನರಿಗಳು ಕನ್ನಡ ಭಾಷೆ ಹಾಗೂ ಲಿಪಿಯನ್ನು ವ್ಯವಸ್ಥಿತವಾಗಿ ರೂಪಿಸಲು ಪ್ರಯತ್ನಿಸಿದರು. ಭಾಷಾಭ್ಯಾಸದ ಸಾಧನಗಳ ಮೂಲಕ ಸಾಹಿತ್ಯಕಾರ್ಯ ಆರಂಭಿಸಿದ ಅವರು ಕನ್ನಡ ವ್ಯಾಕರಣ, ನಿಘಂಟು, ಛಂದಸ್ಸು ರಚನೆ, ಗ್ರಂಥಸಂಪಾದನೆ, ಕ್ರೈಸ್ತ ಸುವಾರ್ತೆಗಳ ಅನುವಾದ ಮುಂತಾದ ಸಾಹಿತ್ಯಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು.

### ೧. ಕೆಥಲಿಕ್ ಮಿಷನ್

ಬೆಂಗಳೂರಿನಲ್ಲಿ ಕೆಥೆಲಿಯನ್ ಪ್ರೆಸ್ ಅನ್ನು ಅಸ್ತಿತ್ವಕ್ಕೆ ತಂದ ಇ.ಎಲ್.ಚಾರ್ಬೊನಾ ಕನ್ನಡ ಗ್ರಂಥೋದ್ಯಮಕ್ಕೆ ತಳಹದಿ ಒದಗಿಸಿದನು. ಈ ಪ್ರೆಸ್‌ನಿಂದ 'ದೈವಪರೀಕ್ಷೆ', 'ಸತ್ಯವೇದ ಪರೀಕ್ಷೆ', 'ದಿವ್ಯಮಾತೃಕೆ', 'ಸುಕೃತ ಮಂತ್ರಗಳು, ಜಪದ ಪುಸ್ತಕ, ಮೊದಲಾದ ಸ್ತೋತ್ರಗ್ರಂಥಗಳು ಬೆಳಕುಕಂಡವು, 'ವೇದ ಮಾರ್ಪಡಿಸುವಿಕೆಯ ಖಂಡನೆ' ಮತ್ತು 'ಪ್ರೊಟಸ್ಟೆಂಟ್ ಎಂಬ ಪತಿತರ ಮಾರ್ಗ' ಎಂಬ ಪ್ರೊಟಸ್ಟೆಂಟ್‌ರ ಬಗ್ಗೆ ವಿರೋಧ ವ್ಯಕ್ತಪಡಿಸುವ ಕೃತಿಗಳನ್ನು ಹೊರತರಲಾಯಿತು ಚಾರ್ಬೋನ ಅವರು 'ಕನಾರೀಸ್ ಲ್ಯಾಟಿನಮ್', 'ಲ್ಯಾಟಿನೊ-ಕನಾರೀಸ್' ಎಂಬ ಎರಡು ಪ್ರಮುಖ ಕೋಶಗಳನ್ನು ರಚಿಸಿ ಲ್ಯಾಟಿನ್ ಕಾವ್ಯಗಳನ್ನು ಓದಲು ಅವಕಾಶ ಕಲ್ಪಿಸಿಕೊಟ್ಟರು. ಇದರ ಪರಿಣಾಮವಾಗಿ ಲ್ಯಾಟಿನ್ ಕಾವ್ಯದ ಪಡಿಯಚ್ಚು ಕನ್ನಡಿಗರಿಗೆ ಲಭ್ಯವಾಯಿತು.

ಎ.ಚೌತೆಲೋ ಎಂಬ ಕೆಥಲಿಕ್ ಮಿಷನರಿಯು ಹಲವು ಪಠ್ಯ ಪುಸ್ತಕಗಳನ್ನೂ ರಚಿಸಿಕೊಟ್ಟನು. 'ಸತ್ಯೋಪದೇಶ' ಎಂಬ ಮಾಲಿಕೆಯ ಹೆಸರಿನಲ್ಲಿ ಹಲವು ಪುಸ್ತಕಗಳನ್ನು ಅನುವಾದಿಸಿ ಕನ್ನಡಕ್ಕೆ ನೀಡಿದನು. 'ಲತೀನು ವ್ಯಾಕರಣ' ಎಂಬ ವಿಶಿಷ್ಟ ಕೃತಿಯನ್ನು ರಚಿಸುವುದರ ಜೊತೆಗೆ ಕನ್ನಡ ಛಂದಸ್ಸನ್ನೂ ಲ್ಯಾಟಿನ್ ಭಾಷೆಯಲ್ಲಿ ಬರೆದನು. 'ಶ್ಲೋಕ ಸಂಗ್ರಹ' ಎಂಬುದು ಕೆಥೆಲಿಕ್ ಮಿಷನರಿಗಳ ಪ್ರಮುಖ ಕೊಡುಗೆ.

### ೨. ಲಂಡನ್ ಮಿಷನ್ ಸಂಸ್ಥೆ

ಜಾನ್ ಹ್ಯಾಂಡ್ಸ್ ಲಂಡನ್ ಮಿಷನ್ ಸಂಸ್ಥೆಯ ಆದ್ಯಮಿಷನರಿಯಾಗಿದ್ದು ಬಳ್ಳಾರಿಯಲ್ಲಿ ಕಾರ್ಯಾರಂಭ ಮಾಡಿದನು. ಕನ್ನಡ ವ್ಯಾಕರಣ, ಶಬ್ದಕೋಶ ಬೈಬಲ್‌ನ ಅನುವಾದ, ಮ್ಯಾಥ್ಯು, ಮಾರ್ಕ್, ಲ್ಯೂಕ್ ಇವರ ಸುವಾರ್ತೆಗಳ ಅನುವಾದ, ಮುಂತಾದವುಗಳ ಮೂಲಕ ಕನ್ನಡ ನಾಡಿನ ಸಾಹಿತ್ಯ ಬೆಳವಣಿಗೆಗೆ

ನೆರವಾದನು. ಕನ್ನಡ ಮುದ್ರಣಯಂತ್ರದ ಬೀಜವನ್ನೂ ಕೂಡ ಈತನೇ ಬಿತ್ತಿದನು. ವಿಲಿಯಂ ರೀವ್‌ನು ಜಾನ್ ಹ್ಯಾಂಡ್ಸ್‌ನ ಸಹೋದ್ಯೋಗಿಯಾಗಿದ್ದು ಇಂಗ್ಲಿಷ್-ಕನ್ನಡ ಶಬ್ದಕೋಶ, ಕನ್ನಡ -ಇಂಗ್ಲಿಷ್ ಶಬ್ದಕೋಶ, ರಚಿಸುವ ಮೂಲಕ ಕನ್ನಡ ಪದಗಳನ್ನು ಸಂಗ್ರಹಿಸಿಕೊಟ್ಟನು. ಹಳಗನ್ನಡದ ಕಾವ್ಯಗಳನ್ನೂ, ನಿಘಂಟು ಶಾಸ್ತ್ರಗಳನ್ನೂ ಪರಿಶೀಲಿಸಿ ಪದಸಂಗ್ರಹ ಕಾರ್ಯ ಮಾಡಿರುವುದಾಗಿ ತಿಳಿದು ಬರುತ್ತದೆ.

ಜಾನ್‌ರೀಡ್ ಎಂಬ ಮಿಷನರಿಯು ಇಂಗ್ಲೆಂಡ್‌ನಲ್ಲಿರುವಾಗಲೇ ಕನ್ನಡವನ್ನು ಕಲಿಯತೊಡಗಿದ್ದನು, ನಿಘಂಟು ಶಬ್ದಗಳನ್ನು ಓದಿ ಅರ್ಥೈಸಿಕೊಂಡು ಗ್ರಂಥೋದ್ಯಮಕ್ಕೆ ಕೈಹಾಕಿದನು. 'ಇಂಗ್ಲಿಷ್ ಭಾಷೆಯನ್ನು ಕಲಿಯುವುದಕ್ಕೆ ಸಹಾಯವು' ಎಂಬ ವಿಶಿಷ್ಟ ಕೃತಿಯನ್ನು ರಚಿಸಿ ಕನ್ನಡ ಬರಹಗಾರರಿಗೆ ಉಪಕರಿಸಿದನು. ಮತ ಪುಸ್ತಕಗಳನ್ನು ಕನ್ನಡ ಮತ್ತು ತೆಲುಗು ಭಾಷೆಗಳಿಗೆ ಅನುವಾದ ಮಾಡಿದನು. ಡಬ್ಲ್ಯೂ-ಬೆಯ್ನನ್ ಎಂಬ ಮಿಷನರಿಯು 'piligrims progress' ಎಂಬ ಕೃತಿಯನ್ನು ಬಳ್ಳಾರಿಯಲ್ಲಿ ಮುದ್ರಿಸಿದನು. ಕಾಲಿನ್ ಕ್ಯಾಂಬೆಲ್ ಶಾಲಾ ಮಕ್ಕಳಿಗಾಗಿ ಮೈಸೂರಿನಲ್ಲಿ 'ಕನ್ನಡ ವ್ಯಾಕರಣ ಸಾರ' ಎಂಬ ವ್ಯಾಕರಣ ಗ್ರಂಥವನ್ನು ರಚಿಸಿದ್ದಾನೆ. ಬೆಂಜಮಿನ್ ಹೋಲ್ಟ್ ರೈಸ್ ಎಂಬ ಮಿಷನರಿಯು ಅನೇಕ ಪ್ರಾಥನಾ ಗೀತೆಗಳನ್ನು ರಚಿಸಿ 'ಕನ್ನಡ ಸಂಗೀತಗಳು' ಎಂಬ ಪುಸ್ತಕರೂಪದಲ್ಲಿ ಹೊರತಂದಿದ್ದಾನೆ. ಈತನು 'ಚಿಕ್ಕವರಿಗೆ ತಕ್ಕ ಪಾಠಗಳು' ಎಂಬ ಸಂಪಾದನಾ ಕೃತಿಯನ್ನು ಪ್ರಕಟಪಡಿಸಿದ್ದಾನೆ. ಡಬ್ಲ್ಯೂ ಬೆಯ್ನನ್‌ನ 'piligrims's progress (ಯಾತ್ರಿಕರ ಸಂಚಾರ) ಎಂಬ ಕೃತಿಯನ್ನು ಪರಿಷ್ಕರಿಸಿ ಬೆಂಗಳೂರಿನ ಬೈಬಲ್ ಸೊಸೈಟಿಯಿಂದ ಹೊರತಂದನು.

ಲಂಡನ್ ಮಿಷನ್ ಸಂಸ್ಥೆಯ ಮಿಷನರಿಗಳು ಕ್ರೈಸ್ತವಾರ್ತೆಗಳು, ಬೈಬಲ್‌ನ ಅನುವಾದಗಳಿಗೇ, ಹೆಚ್ಚು ಆದ್ಯತೆ ನೀಡಿದ್ದರೂ ಅವರ ಬರವಣಿಗೆಯು ಕನ್ನಡದ ಓದುಗರ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರಿವೆ. ಹೊಸಗನ್ನಡ ಕಾವ್ಯದ ಬೀಜಗಳ ಬಿತ್ತನೆ ಈ ರೂಪದಲ್ಲಿ ನಿರಂತರವಾಗಿ ನಡೆದು ಉತ್ತಮ ಫಸಲು ಪಡೆಯಲು ಕಾರಣವಾಯಿತು.

**೩. ವೆಸ್ಲೆಯನ್ ಮಿಷನರಿಗಳು**

ವೆಸ್ಲೆಯನ್ ಮಿಷನರಿಗಳು ಸ್ವಯಂಗ್ರಂಥರಚನೆಗೆ ಹೆಚ್ಚು ಗಮನ ನೀಡದಿದ್ದರೂ ಅವರು ಅನುವಾದಿಸಿ ಇಲ್ಲವೆ ಸಂಪಾದಿಸಿ ಕೊಟ್ಟ ಕೃತಿಗಳು ಅಮೂಲ್ಯವಾದವುಗಳು, ಜಾನ್‌ಗ್ಯಾರೆಟ್, ಡ್ಯಾನಿಯಲ್ ಸ್ಯಾಂಡರ್ಸನ್, ಜಾನ್ ಸ್ಟೀವೆನ್ಸನ್ ಮತ್ತು ಹೆನ್ರಿ ಹೇಗ್ ಮುಂತಾದವರು ಕನ್ನಡ ಪುಸ್ತಕಗಳನ್ನು ಸಂಪಾದಿಸಿ ಹೊರತಂದಿದ್ದಾರೆ. ಇಂಗ್ಲಿಷ್ ಕಲಿಯುವ ಮಕ್ಕಳ ಅನುಕೂಲಕ್ಕಾಗಿ ಇಂಗ್ಲಿಷ್-ಕನ್ನಡ ಕೋಶಗಳ ಪರಿಷ್ಕರಣ ಕಾರ್ಯಕೈಗೊಂಡು ಮರುವರ್ಷವೇ ಕನ್ನಡ-ಇಂಗ್ಲಿಷ್ ಕೋಶವನ್ನು ಹೊರತಂದ ಕೀರ್ತಿ ಜಾನ್ ಗ್ಯಾರೆಟ್‌ಗೆ ಸಲ್ಲುತ್ತದೆ. ಕನ್ನಡ-ಇಂಗ್ಲಿಷ್ ಕೋಶವು ವಿಲಿಯಂ ರೀವ್‌ನ ನಿಘಂಟನ್ನೂ ಆಧರಿಸಿದ್ದರೂ, ಅಲ್ಲಿದ್ದ ಹಳಗನ್ನಡ, ಸಂಸ್ಕೃತ ಶಬ್ದಗಳನ್ನು ಕೈಬಿಟ್ಟು ಪ್ರಚಲಿತವಿರುವ ಕನ್ನಡ ಶಬ್ದಗಳನ್ನು ಆಯ್ದುಕೊಂಡು ಉತ್ತಮ ನಿಘಂಟನ್ನು ರಚಿಸುವಲ್ಲಿ ಗ್ಯಾರೆಟ್ ಯಶಸ್ವಿಯಾಗಿದ್ದಾನೆ. ಹದಿನಾರು ಸಾವಿರಕ್ಕೂ ಅಧಿಕ ಪ್ರಚಲಿತವಿರುವ ಕನ್ನಡ ಪದಗಳಿರುವ ಜನಪ್ರಿಯ ಕನ್ನಡ-ಇಂಗ್ಲಿಷ್ ಕೋಶವನ್ನು ರಚಿಸಿದ್ದಾನೆ. ಭಗವದ್ಗೀತೆಗೆ ಅಖಿಲಭಾರತ

ಕೀರ್ತಿಯನ್ನು ತಂದುಕೊಟ್ಟವನೂ ಗ್ಯಾರೆಟ್. ಭಗವದ್ಗೀತೆ ಅಭ್ಯಾಸ ಮಾಡುವವರ ಅನುಕೂಲಕ್ಕಾಗಿ ಕನ್ನಡ, ಇಂಗ್ಲಿಷ್, ಲ್ಯಾಟಿನ್. ಈ ಮೂರು ಭಾಷೆಗಳಲ್ಲೂ ಪ್ರತ್ಯೇಕ ಆವೃತ್ತಿಗಳನ್ನು ತಂದನು. ಗ್ಯಾರೆಟ್-ಕನ್ನಡ ಆವೃತ್ತಿಯನ್ನು ಚಾರ್ಲಸ್ ವಿಲ್ಕಿನ್ ಭಾಷೆಯ ಆವೃತ್ತಿಗಳನ್ನು ಭಾಷಾಂತರಗೊಳಿಸಿದ್ದಾರೆ. 'ಪಂಚತಂತ್ರ ಕಥೆ'ಗಳನ್ನು ತಿಳಿಯಾದ ಗದ್ಯದಲ್ಲಿ ಗ್ಯಾರೆಟ್ ರಚಿಸಿದನು. ಕೇಶಿರಾಜನ 'ಶಬ್ದಮಣಿದರ್ಪಣ' ಕೃತಿಯ ಮಹತ್ವವನ್ನು ಅರಿತು ಪ್ರಥಮಬಾರಿಗೆ ಸಂಪಾದಿಸಿ ಪ್ರಕಟಿಸಿದವನು ಜಾನ್‌ಗ್ಯಾರೆಟ್ "ಈತನ ಅತ್ಯಂತ ಮಹತ್ವದ ಕೃತಿ Classical Dictionary of India (ಹಿಂದೂ ನಾಮಕೋಶ) ಇದಲ್ಲಿ ಭಾರತೀಯ ಪುರಾಣಗಳು, ಧರ್ಮ-ಗ್ರಂಥಗಳು, ಕಾವ್ಯಗಳು, ಕಲೆಗಳು, ಆಚಾರ-ವಿಚಾರಗಳು, ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಅಕಾರಾದಿಯಾಗಿ ಹೊಂದಿಸಿ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಅವನ ಕನ್ನಡ ಕಾವ್ಯಗಳ ಅಭ್ಯಾಸವು ಇದನ್ನು ಬರೆಯಲು ಪ್ರೇರಣೆಯಿರುತ್ತದೆ."[೨] ಹೀಗೆ ಗ್ಯಾರೇಟ್‌ನ ಕನ್ನಡ ಸಾಹಿತ್ಯಸೇವೆಯು ಹೊಸಗನ್ನಡ ಕಾವ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ.

ಡ್ಯಾನಿಯಲ್ ಸ್ಯಾಂಡರ್ಸನ್ ವೆಸ್ಲೆಯಾನ್ ಮಿಷನರಿಗಳಲ್ಲಿ ಒಬ್ಬನಾಗಿದ್ದು ಸಿ.ಎನ್.ಹಾಲೇ ಇಂಗ್ಲಿಷ್‌ನಲ್ಲಿ ರಚಿಸಿದ್ದ 'Come to Jesus' ಎಂಬ ಪುಸ್ತಕವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾನೆ. 'ಕನ್ನಡ ಕಥಾಸಂಗ್ರಹ' ಎಂಬುದು ಸ್ಯಾಂಡರ್ಸನ್‌ನ ಜನಪ್ರಿಯ ಕೃತಿ. ಯೂರೋಪಿಯನ್ನರಿಗೆ ಕನ್ನಡ ಭಾಷೆಯ ಸಾಹಿತ್ಯಸವಿಯನ್ನು ಉಣಬಡಿಸುವ ಉದ್ದೇಶದಿಂದ

"೧. ಸುಲಭ ಗದ್ಯದ ಕಥೆಗಳು

೨. ಸುಲಭ ಪದ್ಯದ ಕಥೆಗಳು

೩. ಪ್ರೌಢ ಗದ್ಯ ಬರವಣಿಗೆಯ ಕಥಾಸಂಗ್ರಹ

೪. ಹಳಗನ್ನಡ ಶೈಲಿಯ ಪದ್ಯಕಥನಗಳು ಎಂಬ ನಾಲ್ಕು ಕಥಾ ಸಂಗ್ರಹಗಳ ಹೊಳಹುಗಳನ್ನು ಹಾಕಿಕೊಂಡಿದ್ದಾನು. ಪಂಚತಂತ್ರ ಶಿವಪುರಾಣ, ಮಹಾಭಾರತ, ರಾಮಾಯಣ, ದಶಾವತಾರ, ಗಾದೆಗಳು"[೩] ಮುಂತಾದವುಗಳು ಕಥಾಸಂಗ್ರಹಗಳಲ್ಲಿ ಅಡಕವಾಗಿವೆ. ಜಾನ್ ಗ್ಯಾರೆಟ್‌ನ 'ಕನ್ನಡ-ಇಂಗ್ಲಿಷ್' ಕೋಶವನ್ನು ಪರಿಷ್ಕರಿಸಿಕೊಟ್ಟು ಉಪಕರಿಸಿದನು. ಲಕ್ಷ್ಮೀಶನ ಜೈಮಿನಿ ಭಾರತದ ಆರು ಸಂಧಿಗಳನ್ನು ಇಂಗ್ಲಿಷ್ ಅನುವಾದದೊಡನೆ ಪ್ರಕಟಿಸಿದ್ದಾನೆ.

ಜಾನ್‌ಸ್ಟೀವೆನ್‌ಸನ್‌ನು 'ಸತ್ಯವೇದ ಚರಿತ್ರೆ' ಪ್ರಶ್ನೋತ್ತರ ರೂಪ, 'ಸೋಮೇಶ್ವರ ಶತಕ'ದ ಸಂಪಾದನೆ, 'ಮುದ್ರಾಮಂಜೂಷ'ದ ಪರಿಷ್ಕೃತ ಆವೃತ್ತಿಯ ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾನೆ. ಹೆನ್ರಿ ಹೇಗ್‌ನು 'ವೃತ್ತಾಂತ ಪತ್ರಿಕೆ'ಯನ್ನು ಆರಂಭಿಸಿ ಸಾಹಿತ್ಯ ಚಟುವಟಿಕೆಗಳ ಅಭಿವ್ಯಕ್ತಿಗೆ ನೆರವಾಗಿದ್ದಾನೆ. ವೆಸ್ಲಿ ಸಭೆಯ ಸಂಸ್ಕಾರಗಳು 'ವೆಸ್ಲಿ ಅಯ್ಯನವರ ಚರಿತ್ರೆ' ಹೇಗ್‌ನ ಪ್ರಮುಖ ಕೃತಿಗಳು.

## ೪. ಬಾಸೆಲ್ ಮಿಷನರಿಗಳು

ಹೊಸಗನ್ನಡ ಕವಿತೆಗಳಿಗೆ ನಾಂದಿ ಹಾಡಿದ ಕ್ರೈಸ್ತ ಮಿಷನರಿಗಳಲ್ಲಿ ಬಾಸೆಲ್ ಮಿಷನರಿಗಳೇ ಪ್ರಮುಖರು. ಕಾವ್ಯರಚನೆ, ಗ್ರಂಥ ಸಂಪಾದನೆಯ ಗುಣ ಹಾಗೂ ಗಾತ್ರಗಳೆರಡರಲ್ಲಿಯೂ ಬಾಸೆಲ್ ಮಿಷನ್‌ನ ಪಾತ್ರ ಹಿರಿದು. ಹರ್ಮನ್ ಮೊಗ್ಲಿಂಗ್, ಎಚ್.ಜೆ.ವೀಗಲ್, ಫರ್ಡಿನಾಂಡ್ ಕಿಟೆಲ್, ಜಿ.ವುರ್ತ್, ಎಫ್ ಕ್ರಿಗ್ಲರ್ ಮುಂತಾದವರು ಹೊಸಗನ್ನಡ ಸಾಹಿತ್ಯದ ಬೆಳವಣಿಗೆಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ನಿಘಂಟು, ವ್ಯಾಕರಣ, ವ್ಯಾಖ್ಯಾನಗಳು, ದಾಸರ ಪದಗಳು, ಗದ್ಯ, ಹಾಗೂ ಚಂಪೂ ಕಾವ್ಯಗಳ ಸಂಪಾದನೆ, ಕ್ರೈಸ್ತಗೀತೆಗಳು, ಸ್ವತಂತ್ರ ಕಾವ್ಯಮಾಲೆ ಮುಂತಾದ ಕ್ಷೇತ್ರಗಳಲ್ಲಿ ಅವಿರತವಾಗಿ ದುಡಿದಿದ್ದಾರೆ.

ಜರ್ಮನಿಯಿಂದ ಆಗಮಿಸಿದ ಹರ್ಮನ್ ಮೊಗ್ಲಿಂಗ್‌ನು ಕನ್ನಡ ನಾಡಿನಲ್ಲಿ ಧರ್ಮಪ್ರಸಾರ, ಶಿಕ್ಷಣ ಹಾಗೂ ಸಾಹಿತ್ಯರಂಗಗಳಲ್ಲಿ ಅನುಪಮ ಸೇವೆಗೈದಿದ್ದಾನೆ. ಧಾರವಾಡದಲ್ಲಿ ದೈವಜ್ಞಾನ ಶಾಲೆಯ ಅಧ್ಯಾಪನದಲ್ಲಿ ತೊಡಗಿದ್ದ ಮೊಗ್ಲಿಂಗ್ ಕ್ರೈಸ್ತಧರ್ಮ ಪ್ರಸಾರವನ್ನು ಕೈಗೊಂಡನು. ನಂತರ ಕೊಡಗು ಆತನ ಕಾರ್ಯಕ್ಷೇತ್ರವಾಯಿತು. ಕೊಡವರ "ಜೀವನ, ಪುರಾಣೇತಿಹಾಸ, ಹಬ್ಬ, ಉತ್ಸವಾದಿಗಳು, ಹುತ್ತರಿ ಹಾಡು ಇವುಗಳನ್ನು ಪರಿಚಯಿಸುವ ಲೇಖನ ಮಾಲೆಯನ್ನು ಮದ್ರಾಸದ ಇಂಗ್ಲಿಷ್ ಪತ್ರಿಕೆಯೊಂದರಲ್ಲಿ ಪ್ರಕಟಿಸಿದನು."[೪] ಮುಂದೆ ಈ ಲೇಖನಮಾಲೆಯು 'Coorg Memories' ಎಂಬ ಹೆಸರಿನಲ್ಲಿ ಪುಸ್ತಕ ರೂಪ ಪಡೆಯಿತು. 'ರಾಜೇಂದ್ರನಾಮೆ'ಯು ವೀರರಾಜೇಂದ್ರನನ್ನು ಕುರಿತದ್ದಾದರೂ ಕೊಡಗಿನ ಐತಿಹಾಸಿಕ ಮಹತ್ವ ತಿಳಿಸುವ ಪ್ರಮುಖ ಕೃತಿಯಾಗಿದೆ.

'ಮತವಿಚಾರಣೆ', 'ದೇವವಿಚಾರಣೆ', 'ಯಾತ್ರಿಕನ ಸಂಚಾರ', 'ಹೃದಯದರ್ಪಣ', 'ಚಿಕ್ಕನವಾದ ಹೆನ್ರಿಯೂ ಅವನ ಬೋಯಿಯೂ', 'ದೇವವಾಕ್ಯ ವ್ಯಾಖ್ಯಾನ', 'ಬಾಸೆಲ್ ಮಿಷನ್ನಿನ ಸಭಾಕ್ರಮ' ಇವು ಮೊಗ್ಲಿಂಗ್ ಇತರ ಕನ್ನಡ ಕೃತಿಗಳು. ಇವುಗಳು ಕನ್ನಡ ಸಾಹಿತ್ಯ ಪರಂಪರೆಯ ಬೆಳವಣಿಗೆಗೆ ಅಳಿಲು ಸೇವೆಗೈದಿವೆ. 'ಮಂಗಳೂರು ಸಮಾಚಾರ', 'ಕನ್ನಡ ಸಮಾಚಾರ', 'ಕನ್ನಡ ಸುವಾರ್ತಿಕ' ಈ ಮೂರು ಪತ್ರಿಕೆಗಳು ಬರಹಗಾರನ ಅಭಿವ್ಯಕ್ತಿಗೆ ವೇದಿಕೆಯನ್ನು ಕಲ್ಪಿಸಿಕೊಟ್ಟವು. ಕ್ರೈಸ್ತಮಿಷನರಿಗಳು-ಕ್ರೈಸ್ತ ಸುವಾರ್ತೆಗಳನ್ನೂ, ಸಾಹಿತ್ಯ ಸಂಶೋಧನೆಗಳನ್ನು, ಸೃಜನಶೀಲ ಬರಹಗಳನ್ನು ಪತ್ರಿಕೆಗಳ ಮೂಲಕ ಪ್ರಕಟಿಸಲಾಯಿತು.

ಜೈಮಿನಿಭಾರತ, ತೊರವೆರಾಮಾಯಣ, ಕುಮಾರವ್ಯಾಸ ಭಾರತ, ಬಸವಪುರಾಣ, ಚನ್ನಬಸವಪುರಾಣ, ಹರಿಭಕ್ತಿಸಾರ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದ ಕೀರ್ತಿ ಮೊಗ್ಲಿಂಗ್‌ಗೆ ಸಲ್ಲುತ್ತದೆ. ಕನ್ನಡದಲ್ಲಿ ದಾಸರ ಹಾಡುಗಳನ್ನೂ ಪ್ರಥಮಬಾರಿಗೆ ಸಂಕಲನ ಮಾಡಿ "ದಾಸರ ಪದಗಳು" ಎಂಬ ಹೆಸರಿನಲ್ಲಿ ಪ್ರಕಟಿಸಲಾಯಿತು. ಈ ಪುಸ್ತಕದಿಂದ ಆಯ್ದು ೨೪ ಪದ್ಯಗಳನ್ನು ಜರ್ಮನ್ ಭಾಷೆಗೆ ಪದ್ಯರೂಪದಲ್ಲಿ ಭಾಷಾಂತರ ಮಾಡಿ ಪೀಠಿಕೆಯೊಡನೆ ಮೊಗ್ಲಿಂಗ್ ಪ್ರಕಟಿಸಿದ್ದಾನೆ. ಈತನ ಆದ್ಯತೆಯು ಕನ್ನಡ ಲಿಪಿಸುಧಾರಣೆ, ಗ್ರಂಥ ಸಂಪಾದನೆ, ಕಾವ್ಯಗಳ ಜರ್ಮನ್ ಭಾಷಾಂತರ ಕಾಯಕಗಳಿಗೆ ಮೀಸಲಾಗಿದ್ದು "ಹೊಸಗನ್ನಡ ಗದ್ಯ ಹಾಗೂ ಪದ್ಯ ಮಾರ್ಗದ ಹೊಳಹುಗಳನ್ನು ಹಾಕಿದನು."[೫] ಕನ್ನಡ ಕಾವ್ಯದ ಸಮೃದ್ಧತೆಯ

ಹಿಂದೆ ಮೊಗ್ಲಿಂಗ್ ಅವರಂತಹ ಕ್ರಿಯಾಶೀಲ ಮಿಷನರಿಗಳು ಅಪಾರ ಪರಿಶ್ರಮವಿದೆ ಎಂಬುದನ್ನು ಅರಿಯಬೇಕಾದುದು ಅಗತ್ಯ. ಮಿಷನರಿಗಳ ಪ್ರಾರ್ಥನಾ ಪದ್ಯಗಳನ್ನು ಮುಕ್ತ ಛಂದದಲ್ಲಿ ರಚಿಸುವ ಮೂಲಕ ಹೊಸ ಪರಂಪರೆಗೆ ನಾಂದಿ ಹಾಡಿ ಹಳೆಯ ಪರಂಪರೆಗೆ ಮೊಗ್ಲಿಂಗ್ ತಿಲಾಂಜಲಿ ನೀಡಿದ್ದಾನೆ. ಆತನು ರಚಿಸಿರುವ ಸ್ತೋತ್ರದಲ್ಲಿ ಅದನ್ನು ಕಾಣಬಹುದು.

"ಸ್ತೋತ್ರವನುತ್ತಮ ದೇವರಿಗರ್ಪಿಸಬನ್ನಿ
ಊರ್ಧ್ವದಿ ಕರ್ತಗೆ ಮಹಿಮೆಯಾಗಲಿ ಅನ್ನಿ
ಹರುಷದೀ
ದೂತರ ಸಂಘದಲೀ
ಸ್ತೋತ್ರ ಸುಗಂಧವ ತನ್ನಿ
ಭೂದಿವಗಳಾತನ ಸ್ವಾಶ್ರಿತ ರಾಜ್ಯ
ಯಾವನು ಭೂದಿವರಾಜನ ಸಂಗಡ ವ್ಯಾಜ್ಯ
ಮಾಡುವನು?
ಆತನು ನುಡಿಯಲು
ಮರ್ತ್ಯರ ಗದ್ದಲ ತ್ಯಾಜ್ಯ"[೯]

ಹೀಗೆ ಪರಂಪರಾಗತ ಪ್ರಾಸಬದ್ಧ ಛಂದೋನಿಯಮಗಳನ್ನು ಮುರಿದು ಹೊಸ ಛಂದೋಬದ್ಧತೆಗೆ ಅಡಿಗಲ್ಲು ಹಾಕಿಕೊಟ್ಟದ್ದು ಮುಂದೆ ಗೋವಿಂದ ಪೈ ಅಂಥವರಿಗೆ ರಹದಾರಿಯನ್ನು ಒದಗಿಸಿದಂತಾಯಿತು.

ಗಾಡ್‌ಫ್ರೈವೈಗಲ್ ಭಾರತೀಯ ತತ್ವಜ್ಞಾನ ಹಾಗೂ ಕನ್ನಡ ಭಾಷಾ ಪರಿಣತಿಯಲ್ಲಿ ಅಸಾಮಾನ್ಯ ಮಿಷನರಿ ಎನಿಸಿದ್ದನು. ಭಗವದ್ಗೀತೆಯನ್ನು ಅರ್ಜಿಸಿಕೊಂಡು ಇಂಗ್ಲಿಷ್‌ಗೆ ಭಾಷಾಂತರಿಸಿದನು. ಕನ್ನಡ ಭಾಷೆ ಹಾಗೂ ಸಾಹಿತ್ಯವನ್ನು ಕುರಿತು ಸವಿವರವಾಗಿ ಲೇಖನ ಬರೆದು ಪ್ರಕಟಿಸಿದನು. ಹಲವಾರು ಕೃತಿ, ಹಾಗೂ ಕವಿಗಳನ್ನು ಕುರಿತು ಬರೆದದ್ದರಿಂದ ಕನ್ನಡ ಸಾಹಿತ್ಯ ಚರಿತ್ರೆ ಬರೆಯಲು ನೆರವಾಯಿತು. ಕ್ರೈಸ್ತಗೀತೆಗಳನ್ನು ಅನುವಾದಿಸಿ ಕನ್ನಡಿಗರಿಗೆ ನೀಡಿದನು. ಕನ್ನಡ ಕವಿತಾರಚನೆ, ಹಾಗೂ ಭಾಷಾಂತರ ಎರಡರಲ್ಲಿಯೂ ಅಗಾಧ ಪಾಂಡಿತ್ಯ ಪಡೆದಿದ್ದ ವೈಗಲ್ 'ಯಾತ್ರಿಕನ ಸಂಚಾರ' ಕೃತಿಯನ್ನು ಷಟ್ಪದಿ ಹಾಗೂ ಚೌಪದಿ ಪದ್ಯಗಳಲ್ಲಿ ಪ್ರಾಸವನ್ನು ಉಳಿಸಿ ಕಾವ್ಯ ರಚಿಸಿದ್ದಾನೆ.

ಉದಾ: "ಸೇರಲುಬಹುದೋ ಇದರೊಳು ಕಾವಲ
ಗಾರನೆ ತೆರೆದೊಡೆ ನೀನೆನಗೆ
ಮೀರಿದ ಪಾಪಿಗೆ ನಿತ್ಯವು ಸ್ತೋತ್ರವ

ಸಾರುತ ಪಾಡುವೆನುನ್ನತದಿ"[೭]

ಇಲ್ಲಿ ಆದಿಪ್ರಾಸಗಳನ್ನು ಉಳಿಸಿಕೊಂಡು ಚೌಪದಿಯನ್ನು ರಚಿಸಿದ್ದಾನೆ.

ಡಬ್ಲ್ಯೂ.ಜಿ.ವುರ್ತ್ ಈತನು ಬಾಸೆಲ್ ಮಿಷನರಿಗಳ ಪ್ರಮುಖರಲ್ಲೊಬ್ಬನಾಗಿದ್ದ. ಕನ್ನಡ ಹಾಗೂ ಸಂಸ್ಕೃತ ಭಾಷೆಗಳನ್ನು ಆಳವಾಗಿ ಅಭ್ಯಸಿಸಿದ್ದನು. ಧಾರವಾಡವನ್ನು ತನ್ನ ಕಾರ್ಯಕ್ಷೇತ್ರವನ್ನಾಗಿಸಿಕೊಂಡ ವುರ್ತನು ಅಲ್ಲಿನ ವೀರಶೈವರೊಡನೆ ನಿಕಟವಾದ ಸಂಪರ್ಕ ಹೊಂದಿದ್ದನು. ಕನ್ನಡ ಸಾಹಿತ್ಯದ ಆರಂಭದಿಂದ ತನ್ನ ಕಾಲದವರೆಗಿನ ಪ್ರಮುಖ ಕಾವ್ಯಗಳಿಂದ ಆಯ್ದು ಪದ್ಯಗಳನ್ನು ಸಂಗ್ರಹಿಸಿ ಅವುಗಳನ್ನು 'ಪ್ರಕಾವ್ಯ ಮಾಲಿಕೆ' ಎಂಬ ಹೆಸರಿನ ಗ್ರಂಥರೂಪದಲ್ಲಿ ಪ್ರಕಟಿಸಿದನು. ಇದರಲ್ಲಿ ಹಲವಾರು ಕ್ರೈಸ್ತಗೀತೆಗಳು ಇರುವುದರಿಂದ ಹೊಸಗನ್ನಡ ಕಾವ್ಯದ ಗೆರೆಗಳನ್ನು ಗುರುತಿಸಬಹುದಾಗಿದೆ. 'ಬಸವಪುರಾಣ' ಹಾಗೂ 'ಚೆನ್ನಬಸವಪುರಾಣ' ಗ್ರಂಥಗಳ ಕಥಾಸಾರವನ್ನು ಇಂಗ್ಲಿಷ್‌ನಲ್ಲಿ ಬರೆದು ಮುಂಬೈ ಪತ್ರಿಕೆಯಲ್ಲಿ ಪ್ರಕಟಿಸಿದನು. ಸ್ವಯಂಕವಿತಾ ರಚನೆಗೆ ಕೈಹಾಕಿ ಕೆಲವು ಕಾವನಗಳನ್ನು ಕನ್ನಡದಲ್ಲಿ ನೀಡಿದ್ದಾನೆ. ಹಾಗೆಯೇ ಡಬ್ಲ್ಯೂ. ಹಾಕ್ ಎಂಬುವವನು ಮೊಗ್ಲಿಂಗ್ ನೊಡಗೂಡಿ ಹಲವಾರು ಪ್ರಾಥನಾಗೀತೆಗಳನ್ನು ರಚಿಸಿದ್ದಾನೆ.

ಫರ್ಡಿನಾಂಡ್ ಕಿಟೆಲ್ ಕನ್ನಡ ಸಾಹಿತ್ಯ ವಲಯದಲ್ಲಿ ಹೆಸರಿಸಲೇಬೇಕಾದ ಮೇರುಶಕ್ತಿ, ಕನ್ನಡವನ್ನು ಕರಗತ ಮಾಡಿಕೊಂಡಿದ್ದ ದೈತ್ಯ ಪ್ರತಿಭೆ. "ಭಾಷಾವಿಷಯದಲ್ಲಿ ಸೂಕ್ಷ್ಮ ದೃಷ್ಟಿ, ಕಾವ್ಯ, ತತ್ವಜ್ಞಾನಗಳಲ್ಲಿ ಅಪಾರ ಶ್ರದ್ಧೆ ಇವಕ್ಕೆ ಕಳಸವಿಡುವಂತೆ ಅದ್ಭುತ ಮೇಧಾಶಕ್ತಿ-ಇವುಗಳ ಸಂಯೋಗದಿಂದ ಕಿಟೆಲ್ ವಿದ್ವಾಂಸ ಮಂಡಲಿಯಲ್ಲಿ ಗಣಿಸಲ್ಪಟ್ಟವನು."[೮] ಈತನಿಗೆ ಕೊಡಗು ಪ್ರದೇಶ ಸಾಹಿತ್ಯಿಕ ತಪೋಭೂಮಿಯಾಗಿ ಪರಿಣಮಿಸಿತು. ಕೊಡವರ ಜೀವನ ವಿಧಾನ, ಆಚಾರ-ವಿಚಾರಗಳು, ಬಹುಪತ್ನಿತ್ವ ಪದ್ಧತಿ, ಅಲ್ಲಿನ ಶಾಸನಗಳು, ಭಾಷಾ ವೈಶಿಷ್ಟ್ಯತೆಗಳನ್ನು ಕುರಿತು ಲೇಖನ ಬರೆದಿದ್ದಾನೆ. ನಡುಗನ್ನಡ ಕಾವ್ಯ ಹಾಗೂ ಅದರಲ್ಲಿ ಮಹತ್ವ ಪಡೆದಿದ್ದ ಧರ್ಮ ಇವುಗಳಲ್ಲಿ ಇವನ ದೃಷ್ಟಿ ನೆಟ್ಟಿತು. ಕ್ರೈಸ್ತಧರ್ಮ ಪ್ರಸಾರ ಮಾಡುವ ಪ್ರತಿಯೊಬ್ಬ ಮಿಷನರಿಯೂ ಕನ್ನಡ ಕಾವ್ಯಗಳನ್ನು ಅಭ್ಯಸಿಸಿ, ದೇಶೀಯ ರಾಗಗಳಲ್ಲಿ ಪದ್ಯಗಳನ್ನು ರಚಿಸುವಂತೆ ಸೂಚಿಸಿದನು. ಇದರ ಫಲವಾಗಿ 'ಕಥಾಮಾಲೆ' ಎಂಬ ಪದ್ಯಕೃತಿ ಹೊರಬಂದಿತು. ಹಿಂದೂ ಧರ್ಮ ಮತ್ತು ದೇವತೆಗಳ ಟೀಕೆಯುಳ್ಳ 'ಪರಮಾತ್ಮಜ್ಞಾನ' ಎಂಬ ಕೃತಿಯನ್ನು ರಚಿಸಿದ್ದಾನೆ. 'ಯೇಸುಕ್ರಿಸ್ತನ ಶ್ರಮೇಚರಿತ್ರ' ಎಂಬ ಸ್ವತಂತ್ರ ಗದ್ಯಗ್ರಂಥವನ್ನೂ, 'ಕ್ರೈಸ್ತ ಸಭಾಚರಿತ್ರೆ' ಎಂಬ ಅನುವಾದ ಗ್ರಂಥವನ್ನೂ ರಚಿಸಿ ಪ್ರಕಟಿಸಿದನು.

ಪಂಚ ತಂತ್ರವನ್ನು ಅನುವಾದಿಸಿ ಕೊಟ್ಟು, 'ಸಂಣ ಕರ್ನಾಟಕ ಕಾವ್ಯಮಾಲೆ' ಎಂಬ ಕಾವ್ಯವನ್ನೂ, 'ಹಳಗನ್ನಡದ ಸಂಕ್ಷೇಪ ವ್ಯಾಕರಣ ಸೂತ್ರಗಳು' ಎಂಬ ವ್ಯಾಕರಣ ಗ್ರಂಥವನ್ನು ವಿಸ್ತೃತವಾಗಿ ರಚಿಸಿದನು. 'ಕಾವ್ಯಮಂಜರಿ' ಎಂಬ ಕಾವ್ಯ ಸಂಕಲನವನ್ನು ಪ್ರಾಥಮಿಕ ವರ್ಗದ ಶಾಲಾ ಮಕ್ಕಳಿಗಾಗಿ ಸಿದ್ಧಗೊಳಿಸಿದನು. 'ಶಬ್ದಮಣಿದರ್ಪಣ' ಕೃತಿಯನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಹೊರತಂದನು. ನಾಗವರ್ಮನ 'ಛಂದೊಂಬುಧಿ' ಕೃತಿಯೂ ತೆರೆಕಂಡಿತು. ಯಜ್ಞಸುಧಾನಿಧಿ, ಲಿಂಗಪೂಜೆಯ ಮೂಲ, ಎ ಗ್ರಾಮರ್ ಆಫ್ ದಿ ಕನ್ನಡ ಲಂಗ್ವೇಜ್, ಮುಂತಾದ ಕೃತಿಗಳನ್ನು ಕಿಟೆಲ್ ರಚಿಸಿದ್ದಾನೆ. ಈತನ ಹೆಸರನ್ನು ಕನ್ನಡ ಸಾಹಿತ್ಯ

ಲೋಕದಲ್ಲಿ ಚಿರಸ್ಥಾಯಿಯಾಗಿಸಿರುವ ಬೃಹತ್ ಮಹತ್ಕೃತಿ 'ಕನ್ನಡ-ಇಂಗ್ಲಿಷ್ ನಿಘಂಟು'. ಕರ್ನಾಟಕದಾದ್ಯಂತ ಸಂಚರಿಸಿ ಬಳಕೆಯಲ್ಲಿದ್ದ ಹಾಗೂ ಪ್ರಸ್ತುತ ಬಳಕೆಯಲ್ಲಿರುವ ಪದಗಳನ್ನು ಜೇನುಹುಳುವಿನಂತೆ ಹೆಕ್ಕಿ ಸಂಗ್ರಹಿಸಿದನು. ಪದಗಳ ಮೂಲ, ಅರ್ಥನಿರ್ಣಯ, ಪ್ರ್ಯತ್ಪತ್ತಿ, ನುಡಿಗಟ್ಟುಗಳು, ಗಾದೆಗಳು ಎಲ್ಲವನ್ನು ಆಮೂಲಾಗ್ರವಾಗಿ ಸಂಗ್ರಹಿಸಿ ಕೊಟ್ಟದ್ದು ಕಿಟೆಲ್‌ನ ಹೆಗ್ಗಳಿಕೆ.

ಹೊಸಗನ್ನಡ ಕಾವ್ಯರಚನೆಗೆ ಬೇಕಾಗಿದ್ದ ಕೋಶರಚನೆ, ವ್ಯಾಕರಣ, ಛಂದಸ್ಸು, ಅಲಂಕಾರ ಎಲ್ಲವನ್ನು ಹಳಗನ್ನಡ ಕಾವ್ಯಗಳನ್ನು ಆಧರಿಸಿ ಸಿದ್ಧಪಡಿಸಿ ಕಿಟೆಲ್ ಉಪಕರಿಸಿದ್ದಾನೆ. ಕನ್ನಡ ಭಾಷೆ ಹಾಗೂ ಸಾಹಿತ್ಯದ ಪುನರುಜ್ಜೀವನಕ್ಕೆ ಈತನ ಕೊಡುಗೆ ಅನನ್ಯ ಹಾಗೂ ಅನುಪಮವಾದುದು.

ಬಾಸೆಲ್ ಮಿಷನ್ನಿನಲ್ಲಿ ಕಿಟೆಲ್‌ನಂತೆ ಹಲವಾರು ಮಂದಿ ಕನ್ನಡ ಸಾಹಿತ್ಯಸೇವೆ ಗೈದಿದ್ದಾರೆ. ಮೊಗ್ಲಿಂಗ್‌ನಿಂದ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡ ಕೌಂಡಿನ್ಯ 'ಕ್ರೈಸ್ತಧರ್ಮ ಬೋಧನೆ', 'ಪರಿಶುದ್ಧ ಚರಿತ್ರೆ' ಎಂಬ ಪ್ರವಚನ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿಕೊಟ್ಟ ಮೊದಲ ದೇಶೀಯ ಮಿಷನರಿಯಾಗಿದ್ದಾನೆ. ತರುವಾಯ ಕೌಶಿಕ ಬಂಧುಗಳಾದ ಜೈಕಬ್ ಮತ್ತು ಪಾಲ್ ಎಂಬುವವರು 'ಜೀವಾಂತ್ಯಸ್ಮರಣೆ ಕೃಷ್ಣ-ಕ್ರೈಸ್ತರ ನಡುವಿನ ವ್ಯತ್ಯಾಸ ಎಂಬ ಗ್ರಂಥಗಳನ್ನು ರೂಪಿಸಿದರು. ಟಿ.ಜಿ.ಮೊಬೆನ್ 'ವ್ಯವಹಾರಬೋಧಿನಿ', 'ಕನ್ನಡ-ವ್ಯಾಕರಣ ಬೋಧಿನಿ'ಗಳನ್ನು ಕನ್ನಡ ಸಾಹಿತ್ಯರಂಗಕ್ಕೆ ಕೂಡ ಮಾಡಿದ್ದಾನೆ. ಇ.ಪಿ.ಕೆರೆಟ್, ಎಂ.ಆರನ್ಸ್ ಇವರೀರ್ವರೂ ಒಟ್ಟುಗೂಡಿ ಬರೆದ ಹಾಡುಗಳನ್ನು 'ಕ್ರೈಸ್ತಗೀತೆಗಳು' ಎಂಬ ಸಂಕಲನದಲ್ಲಿ ಸಂಗ್ರಹಿಸಲಾಗಿದೆ. ಅಲ್ಲಿರುವ ಪದ್ಯಗಳನ್ನು ಗಮನಿಸೋಣ.

"ಅಪ್ಪಾ ತಂದೆ ವಂದನೆ

ಬಂದೆ ನಿನ್ನ ಪಾದಕೆ

ಬಡ ಬಾಲ ಪ್ರಾರ್ಥನೆ

ಕೇಳು ಸ್ವಾಮಿ ದೇವನೆ"[6]

ಎಂಬ ಸಾಲುಗಳಲ್ಲಿ ಕವಿಯ ಅರ್ಪಣಾಭಾವದೊಡನೆಯೇ ಅಲ್ಲಿ ಬಳಸಿರುವ ಭಾಷೆಯಲ್ಲಿ ಅಪ್ಪಟ ಹೊಸಗನ್ನಡ ಸರಳವಾದ, ಸುಲಲಿತವಾದ ಭಾಷೆಯನ್ನು ಗುರುತಿಸಬಹುದು. ಮಿಷನರಿಗಳು, ತಾವು ನೆಲೆಸಿದ್ದ ನೆಲವನ್ನು ಕುರಿತು ವರ್ಣಿಸುವಲ್ಲಿಯೂ, ಯಶಸ್ಸು ಕಂಡಿದ್ದಾರೆ. ಎ.ಗ್ರೇಟರ್ ಎಂಬ ಮಿಷನರಿಯು ಕೊಡಗನ್ನು ಕುರಿತು

"ಕೊಡಗು ಸ್ವದೇಶವು

ಎಷ್ಟೋ ಚಂದವಾದುದು

ಬೆಟ್ಟ, ಬೆಟ್ಟ, ತುದಿಯೇ

ಮಲೆನಾಡು ತೀರವೇ

ನೀಲಬಣ್ಣ ಕಡಲು

ಸುತ್ತ ಮುತ್ತ ಕಾಣ್ಬುದು"[೧೦]

ಎಂದು ಬಣ್ಣಿಸಿದ್ದಾನೆ, ಕವಿತಾರಚನೆಯಲ್ಲಿ ಆಸಕ್ತಿ ಹೊಂದಿದ್ದ ಗ್ರೇಟರ್ ಕಾವ್ಯ ಹಾಗೂ ಸ್ತೋತ್ರಗಳನ್ನು ರಚಿಸಿದ್ದಾನೆ. ಜೆ.ಮ್ಯಾಕ್ ಕಿಟೆಲ್ ಎನ್ನುವ ಮಿಷನರಿಯು 'ಕಾವ್ಯಪುಂಜ' ಎಂಬ ಕವನ ಸಂಕಲನವನ್ನು ಹೊರತಂದಿದ್ದಾನೆ. ಜೆ.ಎಫ್ ವೈಲ್‌ನು ಕೊಡಗಿನ ಗಾದೆಗಳನ್ನು ಸಂಗ್ರಹಿಸಿ ಕೊಟ್ಟಿದ್ದಾನೆ.

ಹೀಗೆ ಕ್ರೈಸ್ತಮಿಷನರಿಗಳು ಒಂದು ಕೈಯಲ್ಲಿ ಬೈಬಲ್ ಹಿಡಿದು ಬೆನ್ನಿಗೆ ಮುದ್ರಣಯಂತ್ರಕಟ್ಟಿಕೊಂಡು, ಜೊತೆಯಲ್ಲಿ ದೇಶಿಯ ಪಂಡಿತರನ್ನು ಇಟ್ಟುಕೊಂಡು ಸ್ವಮತ ಪ್ರಸಾರ, ಶಿಕ್ಷಣ, ಸಾಹಿತ್ಯ ಸೇವೆ ಎಲ್ಲವನ್ನು ಹಂತಹಂತವಾಗಿ ಜಾರಿಗೊಳಿಸಿದರು. "ಪ್ರವಚನ, ಉಪದೇಶ ಮುಂತಾದ ಧಾರ್ಮಿಕ ಕಾರ್ಯಗಳಲ್ಲದೆ ಶಾಲೆ, ಮುದ್ರಣಾಲಯ, ಸಾರ್ವಜನಿಕ ಮತ್ತು ಸರ್ಕಾರಿ ಸಂಪರ್ಕ ಇವು ಮಿಷನರಿಗಳ ದೈನಂದಿನ ಸಮಯವನ್ನು ಬೇಡುತ್ತಿದ್ದವು"[೧೧] ಅವರಲ್ಲಿದ್ದ ಕುಶಾಗ್ರಮತಿತ್ವ, ತ್ಯಾಗಮನೋಭಾವ, ಕಾಯಕನಿಷ್ಠೆ, ಕೈಗೊಂಡ ಕಾರ್ಯವನ್ನು ಛಲಬಿಡದೆ ಮಾಡಿ ಮುಗಿಸಬೇಕೆಂಬ ಹೆಬ್ಬಯಕೆ, ಸೃಜನಶೀಲತೆ, ಇವೆಲ್ಲವೂ ವರದಾನವಾಗಿ ಪರಿಣಮಿಸಿದವು, ಇದರ ಫಲಶ್ರುತಿಯೆ ಹೊಸಗನ್ನಡ ಕಾವ್ಯದ ಬೆಳವಣಿಗೆಗೆ ಅಗತ್ಯವಾದ ಭದ್ರ ತಳಹದಿ.

ಕ್ರೈಸ್ತಮಿಷನರಿಗೆಳು ಗ್ರಂಥರಚನೆ, ಗ್ರಂಥ ಪರಿಷ್ಕರಣೆ, ಅನುವಾದಗಳ ಮೂಲಕ ಕನ್ನಡ ಕಾವ್ಯಜಗತ್ತಿನ ಶ್ರೀಮಂತಿಕೆಗೆ ಕಾರಣರಾದರು. ಅವರು ನೀಡಿದ ಹೊಸ ಶಿಕ್ಷಣ ಪದ್ಧತಿಯಿಂದಾಗಿ ಜ್ಞಾನದ ದಿಗಂತಗಳು ತೆರೆದುಕೊಂಡು ಹೊಸಲೋಕವೊಂದರ ದರ್ಶನ ಕನ್ನಡಿಗರಿಗಾಯಿತು. ಸಮಾಜ ಸುಧಾರಣೆ, ಲೌಕಿಕದೃಷ್ಟಿ, ವಾಸ್ತವಿಕತೆಯ ದರ್ಶನ, ಸ್ವತಂತ್ರ ವಿಚಾರಗಳ ಅಭಿವ್ಯಕ್ತಿಗಾಗಿ ಸುಶಿಕ್ಷಿತ ಸಮುದಾಯದ ಮನಸ್ಸುಗಳು ತುಡಿಯತೊಡಗಿದವು. ಮಿಷನರಿಗಳ ಪರಿಶ್ರಮದಿಂದಾಗಿ ಕನ್ನಡಕ್ಕೆ ಅಗತ್ಯವಾಗಿದ್ದ ವ್ಯಾಕರಮ, ನಿಘಂಟು, ಛಂದಸ್ಸಿಗೆ ಸಂಬಂಧಿಸಿದ ಗ್ರಂಥಗಳು ಬೆಳಕು ಕಂಡವು. ಪರಂಪರೆಯಿಂದ ಬಂದ ಛಂದೊನಿಯಮಗಳು ಅಲ್ಲಲ್ಲಿ ಮುಕ್ತಾಗ ತೊಡಗಿದ್ದು ಕಾವ್ಯಕೃಷಿಕರಿಗೆ ಅನುಕೂಲವಾಯಿತು. ಜನಭಾಷೆಯಲ್ಲಿ ಜನಜೀವನ ವ್ಯವಸ್ಥೆ, ಸಮಕಾಲೀನ ಸಂಗತಿಗಳು, ಸಾಂಸ್ಕೃತಿಕ ರಸಿಕತೆಗಳು ಅನಾವರಣಗೊಂಡವು. ಹೀಗೆ ಹೊಸಗನ್ನಡ ಕಾವ್ಯಕ್ಕೆ ಸುದೀರ್ಘವೂ, ಶ್ರೀಮಂತವೂ ಆದ ಮಿಷನರಿಗಳ ಸೇವೆ, ಪ್ರಬಲವೂ ಪ್ರಖರವೂ ಆದ ಇಂಗ್ಲಿಷ್ ಸಾಹಿತ್ಯದ ಪ್ರಭಾವ ದಟ್ಟವಾಗಿದ್ದು ಜಡವಾಗಿ ಮಡುಗಟ್ಟಿದ್ದ ಕನ್ನಡ ಕಾವ್ಯಪರಂಪರೆಗೆ ಹೊಸ ಸಂಚಲನ ಉಂಟಾಯಿತು.



## ಅಡಿಟಿಪ್ಪಣಿ

೧. ಕನ್ನಡ ಸಾಹಿತ್ಯ ಚರಿತ್ರೆ, ಮೈ.ವಿ.ವಿ., ಪುಟ ೭೩೨.

೨. ಹೊಸಗನ್ನಡದ ಅರುಣೋದಯ, ಪುಟ ೧೧೯.

೩. ಹೊಸಗನ್ನಡದ ಅರುಣೋದಯ, ಪುಟ ೧೧೦.

೪. ಅದೇ, ಪುಟ ೧೧೫.

೫. ಅದೇ, ಪುಟ ೧೧೯.

೬. ಕನ್ನಡ ಸಾಹಿತ್ಯ ಚರಿತ್ರೆ, ಮೈ.ವಿ.ವಿ., ಪುಟ ೭೪೨.

೭. ಅದೇ, ಪುಟ ೭೪೧.

೮. ಹೊಸಗನ್ನಡದ ಅರುಣೋದಯ, ಪುಟ ೧೨೯.

೯. ಕನ್ನಡ ಸಾಹಿತ್ಯ ಚರಿತ್ರೆ, ಮೈ.ವಿ.ವಿ., ಪುಟ ೭೪೧.

೧೦. ಅದೇ, ಪುಟ ೭೪೧.

೧೧. ಹೊಸಗನ್ನಡದ ಅರುಣೋದಯ, ಪುಟ ೧೩.

## ಹೊಸಗನ್ನಡ ಕಾವ್ಯದ ವಿವಿಧ ಪ್ರಕಾರಗಳು

ಸಾಹಿತ್ಯ ನಿಂತ ನೀರಲ್ಲ. ಅದು ಸದಾ ವಿಕಾಸಶೀಲವಾದುದು. ಸಾಹಿತ್ಯ ಬೆಳೆದಂತೆ, ಬದಲಾದಂತೆ, ಹೊಸತಾದಂತೆ ಅದರ ಪ್ರಕಾರಗಳು ಅನಿವಾರ್ಯವಾಗಿ ಬೆಳೆಯುತ್ತವೆ. ಅಗತ್ಯವಾದ ಹೊಸತನವನ್ನು ಮೈಗೂಡಿಸಿಕೊಳ್ಳುತ್ತವೆ. ಯಾವುದೇ ಸಾಹಿತ್ಯ ಪ್ರಕಾರವೂ ಪ್ರಯೋಗದಗಳ ಪ್ರತಿಕೃತಿಯೇ ಆಗಿರುತ್ತದೆ. ಹಳತು-ಹೊಸತುಗಳ ನಡುವೆ ಸೆಣಸಾಟ ನಡೆದು ಹೊಸತನವು ವಿಜಯದ ನಗೆಬೀರಿರುವುದನ್ನು ಕನ್ನಡ ಸಾಹಿತ್ಯವೂ ಸೇರಿದಂತೆ ಇತರ ಭಾಷೆಗಳ ಸಾಹಿತ್ಯದ ಇತಿಹಾಸದಲ್ಲಿ ಗುರುತಿಸಬಹುದಾಗಿದೆ. ಪ್ರತಿಯೊಂದು ಸಾಹಿತ್ಯ ಪರಂಪರೆಯನ್ನು ಪರಿಶೀಲಿಸಿದಾಗ ಪರಂಪರೆಯ ನೆಲೆಗಟ್ಟಿನ ಮೇಲೆ ನಿಂತೇ ಹೊಸತನವನ್ನು ಸ್ವಾಗತಿಸುತ್ತಾ ಹಳತನವನ್ನು ಅರಗಿಸಿಕೊಳ್ಳುತ್ತ ಸಮನ್ವಯದ ಹಾದಿಯಲ್ಲಿ ಸಾಗುತ್ತಾ ಬಂದಿರುವುದು ಗೋಚರಿಸುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಚತ್ತಾಣ, ಬೆದಂಡೆ ಎಂಬ ಎರಡು ಕಾವ್ಯ ಪ್ರಕಾಗಳಿರುವುದಾಗಿ ಕವಿರಾಜಮಾರ್ಗಕಾರನು ತಿಳಿಸುತ್ತಾನೆ. ಹಳಗನ್ನಡ ಕಾವ್ಯಗಳು ಬಹುಪಾಲು ಚಂಪೂಶೈಲಿಯಿಂದ ಕೂಡಿದ್ದು, ಅದರಲ್ಲಿ ಗದ್ಯ ಹಾಗೂ ಪದ್ಯಗಳ ಮಿಶ್ರಣವಿದೆ. ಪದ್ಯದಲ್ಲಿ ವೃತ್ತ, ಕಂದಗಳೇ ಕಾವ್ಯದ ಸಿಂಹಪಾಲನ್ನು ಪಡೆದಿವೆ. ಹಾಗೆ ತ್ರಿಪದಿ ರಗಳೆ ಪ್ರಕಾರಗಳು ಅಲ್ಲಲ್ಲಿ ಗೋಚರಿಸುತ್ತವೆ. ನಡುಗನ್ನಡ ಸಾಹಿತ್ಯದಲ್ಲಿ ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಮುಂತಾದ ಪ್ರಕಾರಗಳು ಯಥೇಚ್ಛವಾಗಿ ಬಳಕೆಯಾಗಿರುವುದು ಗೋಚರಿಸುತ್ತದೆ.

"೧೮೨೦ ರಿಂದ ೧೯೨೦ರ ವರೆಗಿನ ಕಾಲವನ್ನು ಹೊಸಗನ್ನಡದ ಮೊದಲ ಹಂತವೆಂದಿಟ್ಟುಕೊಂಡರೆ ೧೯೨೦ರಿಂದ ಮುಂದಿನ ಕಾಲವನ್ನು ಎರಡನೆಯ ಹಂತವೆಂದು ಭಾವಿಸಬಹುದು. ಈ ಎರಡನೆಯ ಹಂತ ದೇಶದಾದ್ಯಂತ ಅಪೂರ್ವ ಜಾಗೃತಿಯನ್ನು ಕಂಡ ಕಾಲ ೧೯೨೦ನೆಯ ವರ್ಷವು ಭಾರತ ಮತ್ತು ಕರ್ನಾಟಕದ ಇತಿಹಾಸದಲ್ಲಿ ಮಹತ್ವ ಪೂರ್ಣವಾದ ವರ್ಷವಾಯಿತು. ಸ್ವದೇಶಾಭಿಮಾನ-ಸ್ವದೇಶಾಭಿಮಾನಗಳ ಜೊತೆಗೆ ಸ್ವಾತಂತ್ರ್ಯ ಪ್ರೇಮ, ಸ್ವಾರ್ಥತ್ಯಾಗಗಳು ಅಂದಿನ ತರುಣರನ್ನು ಪ್ರೇರೇಪಿಸಿದವು. ಸ್ವಾತಂತ್ರ್ಯ ಗೀತೆಗಳು ಸ್ವತಂತ್ರ ಪ್ರತಿಭೆಯ ಪ್ರಕಾಶದಲ್ಲಿ ರಚಿತವಾದುವು. ಹೊಸತಾದ ಪ್ರೇರಣೆ, ವಿಷಯ, ಶೈಲಿ, ಛಂದಸ್ಸುಗಳ ಹವ್ಯಾಸ ಹೆಚ್ಚಿತು. ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಪರಕೀಯ ಸತ್ತೆಯೊಡನೆ ಅಸಹಕಾರ ಮಾಡಿದಂತೆ ಸ್ವಭಾಷೆಯ ಮತ್ತು ಅಭಿವ್ಯಕ್ತಿಯ ಸ್ವಾತಂತ್ರ್ಯಕ್ಕಾಗಿ ಲೇಖಕರು ಹಳೆಯ ಸಂಪ್ರದಾಯದ ಸತ್ತೆಯೊಡನೆ ಅಸಹಕಾರ ಹೂಡಿದರು. ಬ್ರಿಟಿಷ್ ಸತ್ತೆಯಿಂದ ಬಿಡುಗಡೆ ಹೊಂದಲು ಬ್ರಿಟಿಷರು ಕಲಿಸಿದ ಬಿಡುಗಡೆಯ ತತ್ವಜ್ಞಾನವೇ ಭಾರತೀಯರಿಗೆ ಪ್ರೇರಕಶಕ್ತಿಯಾಯಿತು. ಸಾಹಿತ್ಯಕ್ಷೇತ್ರದಲ್ಲಿ ಸಹ ಇಂಗ್ಲಿಷ್ ವಾಙ್ಮಯದ ನಿಶಾಂತ ಪ್ರಭಾವವು ಭಾರತೀಯ ಸಾಹಿತ್ಯದ ಹೊಸ ಸ್ವರೂಪಕ್ಕೆ ಕಾರಣವಾಯಿತು. ಮೆಕಾಲೆ ಪ್ರಾರಂಭ ಮಾಡಿದ ವಿದ್ಯಾಭ್ಯಾಸ ಪದ್ಧತಿಯ ಮೂಲಕ ನಮ್ಮ ದೇಶದ ವಿದ್ಯಾವಂತರು ಷೇಕ್ಸ್‌ಪಿಯರ್ ಮತ್ತು ಮಿಲ್ಟನ್ ಇವರ ಮಹಾಕೃತಿಗಳಿಂದ ರೋಮಾಂಚಿತರಾದರು. ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್ ಮುಂತಾದ ಕವಿಗಳ ಭಾವಗೀತೆಗಳಲ್ಲಿ ತನ್ಮಯರಾದರು, ಮಿಲ್‌ಮಾರ್ಲೆಯವರಂಥ ವಿಚಾರವಂತರ ವಿಚಾರ-ವಿವೇಕದಿಂದ ಪರಿಪುಷ್ಟರಾದರು. ಸ್ಕಾಟ್ ಡಿಕೆನ್ಸ್ ಅವರ ಕಾದಂಬರಿಗಳಿಂದ ಸ್ಫುರಣ ಹೊಂದಿದರು.

ಅವರ ಮನೋಲೋಕವು ಇಂಗ್ಲಿಷ್ ಸಾಹಿತ್ಯದ ಚಿತ್ರಗಳಿಂದಲೂ ಪಾತ್ರಗಳಿಂದಲೂ ಕಿಕ್ಕಿರಿಯಿತು. ಕೆಲವು ಕಾಲದ ಮೇಲೆ ಇದಕ್ಕೆ ಪ್ರತಿಕ್ರಿಯೆಯಾಗಿ ಪ್ರಾಚೀನ ಭಾರತೀಯ ಸಂಸ್ಕೃತಿಯ ಪರಿಚಯಕ್ಕಾಗಿ ಮನಸ್ಸು ಹಾತೊರೆಯಿತು. ವೇದೋಪನಿಷತ್ತುಗಳ ವ್ಯಾಸಂಗದಿಂದ ಇನ್ನೊಂದು ಆಳವಾದ ದೃಷ್ಟಿ ತೆರೆಯಿತು. ಪಾರ್ವಾತ್ಯ-ಪಾಶ್ಚಿಮಾತ್ಯ ದೃಷ್ಟಿಗಳ ಸಮನ್ವಯದತ್ತ ಹಲವರ ಮನಸ್ಸು ಹೊರಳಿತು. ಸಮಗ್ರದೇಶದಲ್ಲಿ ಪ್ರಕಟವಾದ ನೂತನ ಶಕ್ತಿ ಕರ್ಣಾಟಕದಲ್ಲಿಯೂ ಸಂಚರಿಸಿತು."[೧]

ಸಾಹಿತ್ಯವು ಹೊಸತನದತ್ತ ಮುಖ ಮಾಡುವುದರೊಡನೆ ಅದರ ಪ್ರಕಾರಗಳೂ ಹೊಸ ಬಗೆಯಾದವು. ಹಳೆಯ ಕಾವ್ಯಪ್ರಕಾರಗಳು ಸಂಪೂರ್ಣವಾಗಿ ತಿರಸ್ಕೃತಗೊಳ್ಳದಿದ್ದರೂ ಹೊಸತದ ಅಬ್ಬರದೊಡನೆ ಸ್ಪರ್ಧಿಸಲಾಗಲಿಲ್ಲ. ಹಳಗನ್ನಡ ಹಾಗೂ ಹೊಸಗನ್ನಡದ ಸಂಧಿಕಾಲದಲ್ಲಿ ಪಾಶ್ಚಿಮಾತ್ಯ ಸಾಹಿತ್ಯ ಪ್ರಕಾರಗಳು ನಿಧಾನವಾಗಿ ಬೇರುಬಿಡಲಾರಂಭಿಸಿದವು. ಆದರೂ ದೇಸೀಯ ಪ್ರಕಾರಗಳಲ್ಲಿ ಪೌರಾಣಿಕ ಕಥನ, ಮತಧರ್ಮ ನಿರೂಪಣೆ, ಭಕ್ತಾದಿಗಳ ಚರಿತ್ರೆ, ಯಕ್ಷಗಾನ, ಮುಂತಾದವುಗಳ ಮೂಲಕ ಕಾವ್ಯ ರಚನೆಯು ತನ್ನ ಅಸ್ತಿತ್ವಕ್ಕಾಗಿ ಹೆಣಗಾಡಬೇಕಾಯಿತು. ದಾಸಪದಗಳು, ಜನಪದಗೀತೆಗಳು, ಶೃಂಗಾರದ ಹಾಡುಗಳು ಅಲ್ಲಲ್ಲಿ ಕಂಡುಬರುತ್ತವೆ. ಹೊಸಗನ್ನಡ ಆರಂಭದ ಸಂಕ್ರಮಣ ಸನ್ನಿವೇಶದಲ್ಲಿ ರಂಗಭೂಮಿ ಹಾಡುಗಳು, ಲಾವಣಿ ಹಾಡುಗಳು ಕ್ರೈಸ್ತಗೀತೆಗಳು ವರ್ಣನ ಗೀತೆಗಳು ಉಪದೇಶ ಗೀತೆಗಳು, ನಾಟಕದ ಹಾಡುಗಳು ಹೆಚ್ಚಾಗಿ ಕಂಡು ಬರುತ್ತವೆ.

ನವೋದಯ ಕಾವ್ಯದ ಆರಂಭದಲ್ಲಿ ಪಾಶ್ಚಾತ್ಯ ಸಾಹಿತ್ಯ ಹಾಗೂ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ಕನ್ನಡ ನೆಲದ ಸಾಮಾಜಿಕ ಸ್ಥಿತಿ-ಗತಿ, ಹೊಸ ವಿಚಾರಸರಣಿ ಹಾಗೂ ಪರಂಪರಾಗತ ಮೌಲ್ಯಗಳು ಮುಪ್ಪುರಿಗೊಂಡು ಕವಿಯ ಆಲೋಚನಾಲಹರಿಯನ್ನು ಹೊಸದಿಗಂತದೆಡೆಗೆ ಕೊಂಡೊಯ್ದವು. ನವೋದಯ ಕಾವ್ಯದ ಮಟ್ಟಗಳಿಗೆ ಅಡಿಯಿಟ್ಟು ಮುದ್ದಣನು ಗದ್ಯ ಕಾವ್ಯ ಹಾಗೂ ಪದ್ಯಕಾವ್ಯಗಳನ್ನೂ ರಚಿಸಿದ್ದಾನೆ. 'ಶ್ರೀರಾಮ ಪಟ್ಟಾಭಿಷೇಕ' ಕಾವ್ಯವನ್ನು ಷಟ್ಪದಿಯಲ್ಲಿ ರಚಿಸಿದ್ದರೆ 'ಅದ್ಭುತರಾಮಾಯಣ' ಮತ್ತು 'ರಾಮಾಶ್ವಮೇಧ' ಗ್ರಂಥಗಳನ್ನು ತಿರುಳ್ಗನ್ನಡದ ಗದ್ಯದಲ್ಲಿ ರಚಿಸಿದ್ದಾನೆ. ಆದ್ದರಿಂದ "ಮುದ್ದಣನನ್ನು ಪ್ರಭಾತ ರವಿಯೆಂದೂ, ಕನ್ನಡ ನವೋದಯದ ಮುಗೋಳಿಯೆಂದೂ, ಹೊಸಗನ್ನಡ ಕಾವ್ಯಾರಾಮದ ಮೊದಲ ಕೋಗಿಲೆಯೆಂದೂ ಪ್ರಶಂಸಿಸಲಾಗಿದೆ."[೨] ಹೊಸದೊಂದು ಕಾವ್ಯಭಾಷೆಗೆ ನಾಂದಿ ಹಾಡಿದ ಮುದ್ದಣನು ಹೊಸಕಾವ್ಯಪ್ರಕಾರಗಳ ಉಗಮಕ್ಕೂ ಪರೋಕ್ಷವಾಗಿ ಪ್ರಭಾವ ಬೀರಿದನು. ಕ್ರೈಸ್ತ ಮಿಷನರಿಗಳು ಕ್ರೈಸ್ತಗೀತೆಗಳನ್ನು ರಚಿಸುವುದರ ಜೊತೆ ಜೊತೆಯಲ್ಲಿಯೇ ಕವನ ಸಂಕಲನಗಳನ್ನು 'ಕಾವ್ಯಮಾಲಿಕೆ' ಎಂಬ ತಲೆಬರಹದಡಿಯಲ್ಲಿ ಪ್ರಕಟಿಸಿದರು.

### ೧. ಕ್ರೈಸ್ತಗೀತೆಗಳು

ಕ್ರೈಸ್ತ ಮಿಷನರಿಗಳು ಹೊಸಗನ್ನಡ ಕಾವ್ಯದ ಮೊದಲಲ್ಲಿ ಕ್ರೈಸ್ತಗೀತೆಗಳ ಕನ್ನಡಾನುವಾದವನ್ನೆ ಪ್ರಧಾನವಾಗಿ ಪರಿಚಯಿಸಿದರು. ಬಾಸೆಲ್ ಮಿಷನ್ ವತಿಯಿಂದ ಅನುವಾದಗೊಂಡ ಬನ್ಯನ್ನನ 'ಯಾತ್ರಿಕನ ಸಂಚಾರ' ಕೃತಿಯಲ್ಲಿ ವೈಗಲ್‌ನು ಪ್ರಾಸವನ್ನು ಅನುಸರಿಸಿಯೇ ಕಾವ್ಯಾನುವಾದ ಮಾಡಿರುವುದು ಕಂಡು ಬರುತ್ತದೆ.

"ಪಾಪ ಹೊರೆಯಿಂದೀ ಪರಿಯಂತರ

ತಾಪವಗೊಂಡೆನು ಹೋಯಿತದು

ಆಪತ್ತಿಲ್ಲದ ಸುಖವೆನಗಾಯಿತು

ಈ ಪರಿಶುದ್ಧ ಸ್ಥಳವೇನೊ"[೩]

ಈ ಪದ್ಯದಲ್ಲಿ ದ್ವಿತೀಯಾಕ್ಷರದ ಆದಿ ಪ್ರಾಸವಿರುವುದನ್ನು ಕಾಣಬಹುದಾಗಿದೆ. ಪರಂಪರೆಯಿಂದ ಬಂದ ಮಾರ್ಗೀಯ ಛಂದೋ ನಿಯಮಗಳನ್ನು ಮುರಿಯಲ್ಲಿ ಮಿಷನರಿಗಳೂ ಕೂಡ ಹಿಂದೇಟು ಹಾಕಿರುವುದನ್ನು ಗಮನಿಸಬೇಕು. ಕ್ರಿಸ್ತನ ಉಪದೇಶವನ್ನು ಹೇಳುವ ಪದ್ಯಗಳಲ್ಲಿಯೂ ಪ್ರಾಸಪದ್ಧತಿ ಮುಂದುವರೆದಿರುವುದನ್ನು ಕಾಣಬಹುದು.

"ಒಂದು ದಿನದಲ್ಲೇಸು ತನ್ನೊಡ

ಬಂದ ಶಿಷ್ಯರ ಸಹಿತ ಹಡಗವ

ನೆಂದಿನಂದದಿಯೇರಿ ಹೊಗಲಿಕಾಸಮಯದಳಗೇ||

ಸುಂದರಾನಿಲ ಶಾಂತಿಯಿದ್ದೆಡೆ

ಮುಂದ ಘೋರದ ಕಂಪವೇಳಲ್

ಕಂದದಿಂದಲಿ ನಿದ್ರೆ ಮಾಡುತಲೇಸು ಮಲಗಿಹನೂ||೧||

ಜ್ಯೋತಿ ಮಂಡಲವಡಗಿ ಬಿರ್ರನೆ

ವಾತ ಬೀಸಲು ಕಡಲಿನಲ್ಲಿತಿ

ಘಾತವಾಗುತ ಘೋರಘೋರದ ತೆರೆಗಳುಕ್ಕುತಲೆ||

ಘಾತಪೊದಗುವ ಹಾಗೆ ಹಡಗವ

ಜಾತಕಾತರದಲೆಗಳಾದರಿಸ

ಲಾತನಡಿಗಡೆ ಶಿಷ್ಯರೋಡುತ ಬಂದು ಕೂಗಿದರೂ||೨||

ಒಡೆಯ ಯೀ ಪರಿ ತೆರೆಯು ಹಡಗವ

ಹೊಡೆಯೆ ಚಿಂತೆಯು ನಿಂಗೆ ಹತ್ತದೆ

ಯೊಡೆದು ಹೋದೀಲೇಗರೆಲ್ಲರು ನಶಿಸಿಯೇವೆನ್ನೇ||

ಮಡಿವ ಭಯದವರನ್ನು ತನ್ನಯ

ದಡಿಯಲೆಚ್ಚತ್ತಿೀಕ್ಷಿಸೇಸುವು

ನುಡಿದ ಪವನವ ಕಡಲ ಬೆದರಿಸಿ ಸುಮ್ಮನಿರಿಸಿದನೂ||೩||

ಶಾಂತಿಯಾಯಿತು, ಫಾಳಿ ನಿಂತ್ರವಿ

ಕಾಂತಿ ಪಸರಿಸಿತೆಳೆಯ ಬಿಸಿಲಿಂ

ಕ್ರಾಂತಿ ಕರ್ತನು ಬಳಿಕ ಶಿಷ್ಯರಿಗೊರೆದನಿಂತೆಂದೂ||

ಭ್ರಾಂತರಾದಿರಿ ಹೇಡಿಗಳೇ, ಯಾ

ಕಾಂತು ಕೊಳ್ಳದೆ ನನ್ನ ಶಕ್ತಿ?

ಕ್ಷಾಂತಿ ಮಾಡುವದೆಷ್ಟು ಸರ್ತ್ಯಲೆ ನಿಮಪನಂಬಿಕೆಯಾ||೪|| "[೪]

ಈ ಪದ್ಯವು ಆದಿ ಪ್ರಾಸವನ್ನು ಹೊಂದಿದ್ದು ಭಾಮಿನಿ ಷಟ್ಪದಿಯ ಛಂದೋನಿಯಮಗಳಿಂದ ಕೂಡಿದೆ. ಕವಿಯು ಛಂದೋನಿಯಮಗಳಿಗೆ ಕಟ್ಟುಬಿದ್ದು ಉಂಟುಮಾಡಿರುವ ಶಾಬ್ದಿಕ ಗೊಂದಲಗಳು, ಎದ್ದು ಕಾಣುತ್ತವೆ. ಕಂಪವೇಳಲ್ಕಂದದಿಂದಲಿ, ಮಾಡುತಲೇಸು, ಘೋರಘೋರದ, ಜಾತಕಾತರ, ದಡಿಯಲೆಚ್ಚತ್ತಿೀಕ್ಷಿಸೇಸುವು, ನಿಂತ್ರವಿಕಾಂತಿ ಸರ್ತ್ಯಲೆ, ನಿಮಪನಂಬಿಕೆಯ ಮುಂತಾದ ಪದಗಳನ್ನು ಗಮನಿಸಿದಾಗ ಇಲ್ಲಿರುವ ಸಂಧಿದೋಷ, ಅಪಾರ್ಥಶಬ್ದ ಪ್ರಯೋಗ, ಶಬ್ದಗಳ ಶಿಥಿಲಜೋಡಣೆಗಳು ಸಂಸ್ಕೃತಭೂಯಿಷ್ಠತೆಯನ್ನೆ ಪ್ರತಿಧ್ವನಿಸುವಂತಿವೆ. ಭಾಷಿಕ ಸಂಕ್ರಮಣ ಸ್ಥಿತಿಯಲ್ಲಿ ಇಂತಹ ದೋಷಿಗಳು ಸಾಮಾನ್ಯವಾಗಿರುವುದು ಸಹಜ.

ವೈಗಲ್, ಮೊಗ್ಲಿಂಗ್, ಕಿಟೆಲ್, ಬಿ.ಎಚ್.ರೈಸ್, ಸಾಮ್ಯುಯಲ್, ಎ.ಗ್ರೇಟರ್ ಮುಂತಾದವರು ಉತ್ತಮವಾಗಿ ಕ್ರೈಸ್ತಗೀತೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಸರಳವಾದ, ಸ್ವಚ್ಛಂದವಾದ ಹೊಸಗನ್ನಡ ಭಾಷೆಯಲ್ಲಿ ಕ್ರೈಸ್ತಭಾವಗೀತೆಗಳನ್ನು ರಚಿಸಿದ್ದಾರೆ. ಇ.ಪಿ.ಕೆರಟ್ ಒಂದು ಪದ್ಯ ಉತ್ತಮ ನಿದರ್ಶನ.

"ಅಪ್ಪಾ ತಂದೆ ವಂದನೆ

ಬಂದೆ ನಿನ್ನ ಪಾದಕೆ

ಬಡ ಬಾಲ ಪ್ರಾರ್ಥನ

ಕೇಳು ಸ್ವಾಮಿ ದೇವರೆ

...........

ಬಹುಪಾಪ ಮಾಡಿದೆ

ನಿನ್ನ ಮಾತು ಕೇಳದೆ

ನೋಡಿ ಯೇಸು ಮುಖವಂ

ಮಾಡು ಪರಿಹಾರವಂ

ನನ್ನ ಮಿತ್ರಾಮಿತ್ರರಂ

ಸರ್ವಬಂಧು ವರ್ಗವಂ

ಲೋಕಜನರೆಲ್ಲರಂ

ನೋಡಿ ನೀಡು ಕ್ಷೇಮವಂ

ಬೇಗ ಸೊಂಪು ನಿದ್ದೆಯ

ಕೊಟ್ಟು ಇಂದು ರಾತ್ರಿಯ

ಕಾವಲಿಗೆ ದೂತರ

ಕಳುಹೆನ್ನ ಹತ್ತರ"[೫] (ಕ್ರೈಸ್ತಗೀತೆಗಳು ನಂ.೩೩೫)

ಹೀಗೆ ಕ್ರೈಸ್ತಗೀತೆಗಳ ಭಾಷೆಯೂ ಸರಳಾಗುತ್ತಾ ದೇಶೀಯತೆಯತ್ತ ಸಾಗಿತು. ಆರಂಭದಲ್ಲಿದ್ದ ಆದಿಪ್ರಾಸವು ಅಂತ್ಯಪ್ರಾಸದತ್ತ ಹೊರಳಿತು, ಕೊನೆಗೆ ಅದೂ ಅನಿವಾರ್ಯವಲ್ಲವೆಂಬ ತೀರ್ಮಾನಕ್ಕೆ ಬಂದಿರುವುದೂ ಕಾಣುತ್ತದೆ. ಕವಿತೆಗಳು ಗೇಯತೆಯನ್ನು ಹೊಂದಿ ಭಾವಗೀತೆಗಳಾದವು. ಗೋವಿಂದ ಪೈ ಅವರ ಪ್ರಾಸತ್ಯಾಗ ತೀರ್ಮಾನಕ್ಕೆ ಕ್ರೈಸ್ತ ಗೀತೆಗಳ ಪ್ರಭಾವ ದಟ್ಟವಾಗಿದೆ. ಕನ್ನಡ ಕಾವ್ಯದ ಹೊಸತನಕ್ಕೆ ಕ್ರೈಸ್ತಗೀತೆಗಳು ಪರಿಕರಗಳನ್ನೊದಗಿಸಿ ನೀರೆರೆದು ಪೋಷಿಸಿವೆ.

**೨. ಲಾವಣಿ ಹಾಡುಗಳು**

ದೇಸೀಯ ಜನಪದ ಮಟ್ಟುಗಳನ್ನು ಹೊಂದಿರುವ ಲಾವಣಿಗಳು ಹೊಸಗನ್ನಡ ಕಾವ್ಯದ ಆರಂಭದಲ್ಲಿ ವೀರಗೀತೆಗಳೂ, ಬಂಡಾಯದ ಪ್ರತಿಧ್ವನಿಗಳೂ, ನಾಡಿನ ಸಮಕಾಲಿನ ಘಟನೆಗಳನ್ನು ಬಿಂಬಿಸುವ ಐತಿಹಾಸಿಕ ದಾಖಲೆಗಳೂ ಆಗಿದ್ದವು. ಕಿತ್ತೂರಿನ ರಾಣಿ, ನರಗುಂದ ಮತ್ತು ಮುಂಡರಗಿ ಬಂಡಾಯ, ಬ್ರಿಟಿಷರ ತೆರಿಗೆ ನೀತಿ, ಕೆಳದಿ ನಾಯಕರನ್ನು ಸಂಗೊಳ್ಳಿರಾಯಣ್ಣ ಇನ್ನೂ ಮುಂತಾದ ವ್ಯಕ್ತಿ ಮತ್ತು ವಿಷಯಗಳನಾಧರಿಸಿ ಲಾವಣಿಗಳು ರಚನೆಯಾಗಿವೆ. ಜಾನ್ ಫ್ಲೀಟ್ ಲಾವಣಿಗಳನ್ನು ಸಂಗ್ರಹಿಸುವ ಮೂಲಕ ಕನ್ನಡ ಕಾವ್ಯಲೋಕಕ್ಕೆ ಅಮೂಲ್ಯ ಸಂಪತ್ತನ್ನು ಒದಗಿಸಿಕೊಟ್ಟಿದ್ದಾನೆ.

ಹಲಗಲಿ ಬೇಡರು ಶಸ್ತ್ರಾಸ್ತ್ರಗಳನ್ನು ಹೊಂದುವುದು ಕಾನೂನಿನ ಮೂಲಕ ಅಪರಾಧ ಎಂಬ ಶಾಸನವನ್ನು ಬ್ರಿಟಿಷರು ಜಾರಿಗೆ ತಂದಾಗ ಬೇಡ ಜನತೆ ಪ್ರತಿಭಟಿಸುವ ರೀತಿಯನ್ನು ಕೆಳಗಿನ ಲಾವಣಿ ಒಳಗೊಂಡಿದೆ. ಇಲ್ಲಿ ಪ್ರತಿಭಟನೆಯ ಸ್ವರೂಪದ ತೀವ್ರತೆಯನ್ನು ಗಮನಿಸಬೇಕು.

ಹೊತ್ತು ಬಂದಿತು ಮತ್ತ ನೋಡಿರಿ ಕತ್ತಿ ಹಿಡಿದ ಜನಕೆ

ಶಿಟ್ಟಿನ ಮಂದಿ ಭಂಟರ ಹಲಗಲಿ ಮುಟ್ಟಲಿಲ್ಲ ದಡಕ

ವಿಲಾತಿಯಿಂದ ಹುಕುಮು ಕಳವಿದರ ಕುಂಪಣಿ ಸರಕಾರಾ

ಎಲ್ಲ ಜನರನಾ ತರಿಸಿ ಜೋರಿ ಮಾಡಿ ತರಬೇಕ ಹತಾರಾ

ಕತ್ತಿ ಕಟಾರಿ ಕೈಚೂರಿ ಚಾಕು ಗುರ್ದಿ ಸುರಾಯಿ ಚಕ್ರಾ

ಬಾಲಿಯ ಬರ್ಚಿ ಬಿಚ್ಚುಗತ್ತಿ ನೋಡ ಬಾಣ ಬಿಲ್ಲಿನವರಾ

ಪಟಾಲ ಪಿಸ್ತುಲ ಕರುಲಿ ತೇಗಾ ಚಪಗೊಡ್ಲಿ ಶಾಸ್ತ್ರ

ತೋಪು ತುಪಾಕಿ ಹೊಡವು ಮದ್ದುಗುಂಡ ಬಿಡ ಬ್ಯಾಡಿರಿ ಚೂರಾ

ಕೊಡದ ದಿಟಾಯಿ ಮಾಡಿದವರನಾ ಕಡದ ಹಾಕರಿ ರಾ ರಾ

. . . . . . . . . .

ಹಲ್ಲ ಕಿತ್ತಿದ ಹಾವಿನ ಪರಿಯು ನಮಗೆ ಆದೀತಲ್ಲಾ

ಕಂಡಿ ಮುಸಕ ಹಾಕಿ ತಿರುಗಿದರ ನಮಮಾನ ಉಳಿಯುವುದಿಲ್ಲಾ

ಮಗ್ಗಲದಾಗಿನ ಹೇಣತಿ ಕೊಟ್ಟಾಂಗ ಅತಿ ಹೇಡಿ ಆದೆವಲ್ಲಾ

ಸತ್ತಾ ಹೆಣಕ ಶೃಂಗಾರ ಮಾಡಿದ ಪರಿ ಆದೀತಲ್ಲಾ"[೬]

ಈ ಲಾವಣಿಯ ಹಾಡು ಜನತೆಯ ಆಕ್ರೋಶವನ್ನು ಸೂಚಿಸುವಂತೆ ಕಂಡರೂ ಬ್ರಿಟಿಷರ ವಿರುದ್ಧ ದೇಶದ ಸ್ವಾತಂತ್ರ್ಯಕ್ಕಾಗಿ ಜನರಲ್ಲಿ ಹೋರಾಟದ ಕಿಚ್ಚನ್ನು ಹಚ್ಚುವುದು ಇದರ ಒಳಸುಳಿ, ಕಂಪನಿಯ ಸರ್ಕಾರವು ಬೇಟೆಯನ್ನೆ ಬದುಕನ್ನಾಗಿಸಿಕೊಂಡು ಬದುಕುತ್ತಿರುವ ಬೇಡರ ಮೇಲೆ ಶಾಸನವೆಂಬ ಬ್ರಹ್ಮಾಸ್ತ್ರಾ ಬಿಟ್ಟರು, ತಮ್ಮ ಉಳಿವಿಗಾಗಿ ಬೇಡಜನರು ಒಗ್ಗೂಡಿ ಪ್ರತಿಭಟಿಸುವುದನ್ನು ಈ ಸಾಲುಗಳು ಪ್ರತಿಧ್ವನಿಸುತ್ತವೆ. ಇಲ್ಲಿ "ಹಲ್ಲುಕಿತ್ತ ಹಾವಿನ ಚಿತ್ರ ಹಲ್ಲಿಲ್ಲದ ಹಾವಿನ ರೋಷದ ನಿರರ್ಥಕತೆಯೇನೆಂಬುದು ಧ್ವನಿಸಿದರೆ ರಂಡಿ ಮುಸುಕು ಹಾಕಿ ನಡೆಯುವ ರೀತಿ ಭೀತರಾಗಿ ಬದುಕಬೇಕಾಗಿ ಬರುವ ಹೀನ ಸ್ಥಿತಿಯನ್ನು ಬಿಂಬಿಸುತ್ತದೆ. ಕಡೆಯ ಸಾಲುಗಳು ಗ್ರಾಮ್ಯದ ಒರಟುತನದಿಂದ ಕೂಡಿದ ಅಪಮಾನದಿಂದುಂಟಾಗುವ ಆಕ್ರೋಶವನ್ನು

ಮನದಟ್ಟು ಮಾಡುತ್ತದೆ. ಇಷ್ಟೆಲ್ಲಾ ಆದ ಮೇಲೆ ಇನ್ನು ಈ ಜನ ಸತ್ತ ಹೆಣಕ್ಕೆ ಶೃಂಗಾರ ಮಾಡಿದ ರೀತಿ ಅಲ್ಲವೇನು? ಇಲ್ಲಿನ ಅಭಿವ್ಯಕ್ತಿ ಪ್ರಜ್ಞಾಪೂರ್ಣವಾದ ಕಾವ್ಯಾಭಿವ್ಯಕ್ತಿಯ ಮಟ್ಟದಲ್ಲಿ ಸತ್ವಪೂರ್ಣವಾಗಿರುವುದನ್ನು ಗಮನಿಸಬೇಕು."[2] ಲಾವಣಿ ಹಾಡುಗಳು ಸ್ವಾತಂತ್ರ್ಯ ಹೋರಾಟವನ್ನು ಹೆಚ್ಚಿಸುವುದರ ಜೊತೆಜೊತೆಯಲ್ಲೆ ಕನ್ನಡ ಕಾವ್ಯ ಪರಂಪರೆಯನ್ನು ಶ್ರೀಮಂತಗೊಳಿಸುವಲ್ಲಿ ಸಹಕಾರಿಯಾಗಿವೆ. ಇವು ಗೇಯತೆಯನ್ನೆ ಪ್ರಧಾನವಾಗಿರಿಸಿಕೊಂಡು ಛಂದೋನಿಯಮಗಳನ್ನು ದೂರಸರಿಸಿ ಹೊಸಗನ್ನಡ ಕಾವ್ಯ ಸ್ವರೂಪವನ್ನು ಜಾನಪದ ಮಟ್ಟುಗಳಲ್ಲಿ ಅಳವಡಿಸಿಕೊಂಡು ರಚನೆಯಾಗಿದೆ.

ಕ್ರಿ.ಶ.೧೯೦೦ ಸುಮಾರಿನಲ್ಲಿ ಶಾಂತಕವಿಗಳಂಥ ದಕ್ಷ ಪ್ರತಿಭಾವಂತ ಕನ್ನಡಿಗನ ಮೂಸೆಯಲ್ಲಿ ಹಲವು ಲಾವಣಿಗಳು ಭಾವಗೀತೆಯ ಲಯದಲ್ಲಿ ನಿರ್ಮಾಣಗೊಂಡವು. ಅವರು ರಚಿಸಿದ ಲಾವಣಿಗಳು ಕನ್ನಡ ಭಾಷೆಯನ್ನು ಹದಗೊಳಿಸುವ ಮೂಲಕ ಹೊಸಗನ್ನಡ ಕಾವ್ಯಪರಂಪರೆಯ ಶ್ರೀಮಂತಿಕೆಗೆ ಕಾರಣೀಭೂತರಾದರೆಂಬುದನ್ನು ಈ ಕೆಳಗಿನ ಲಾವಣಿಯಿಂದ ತಿಳಿಯಬಹುದು.

"ನೀ ಯಾರಿಗ್ಯಾಳತಿ

ಹೊಲಾ ಹೊಡೀತಿ| ಹಸನಮಾಡತೀ

ಬೀಜ ಹಾಕತೀ ಕಾಯಿಸತೀ

ಬೆಳೀ ನೋಡತೀ| ಕೋಲಿಗೆ ಬಂತಂತಿ

ಹೆರವರಣ ಚಂಡಿಯಾಡಿದರ ಯಾರಿಗ್ಯಾಳತಿ| ನೀಯಾರಿಗ್ಯಾಳತೀ||

ಹಗಲೆಲ್ಲ ದುಡೀತಿ| ಹೈರಾಣ ಆಗತೀ

ರಾತರಿನ್ಯಾಗ ನಿದ್ದಿ ಬಂದು ನೀ ಬೀಳತೀ

ಮನಿ ತುಂಬಿ ಬಾಳೇವು ಹಾಂಗ ಬಿದಿರತೈತಿ

ಬೆಳತಂಕ ಮನಿಕಾಯಾಕ್ಯಾರಿಗ್ಯೇಳಿರತೀ

ಹೆಣತಿನ್ನ ಮಾಡಿಕೊಂತಿ| ಮನೆ ತುಂಬಿಸಿಕೊಂತಿ

ಮನದಾಗ ಮಾರಿದೋಡಿ ಬಾಳ ಹಿಗ್ಗತೀ

ಬಾಳೇವ ಮಾಡೇನಂತಿ| ಎಲ್ಲಾನು ಬೇಕಂತಿ

ಹೇಣತಿ ಬಾಳೇವೊಲ್ಲೆಂತ ಬಿಟ್ಟರ್ಯಾರಿಗ್ಯಾಳತೀ

ಉಂಗುರಾ ಇಡತೀ| ಉಡದಾರ ಕಟ್ಟತಿ|

ಜರತಾರಿ ಪಾವಡ ತಿದಿತಿದ್ದಿ ಸುತ್ತತೀ

ಊರಾಗ್ಹರದಾಡತೀ| ಬಡವರನ ಬೆದರಸತೀ

ಅಲ್ಲೇನಿನ್ನ ಸುಲಕೊಂಡ ಬಿಟ್ಟರ್‍ಯಾರಿಗ್ಹೇಳತೀ

ಸುಳ್ಳೆ ಮೀಸೀ ಹೊರತಿ| ಮೈಯಾಗಿಲ್ಲ ಸಗತೀ

ನಿನ್ನದ ನೀನು ಕಾಯಲಾರದ್ಯಾತಕಳತೀ

ಬಡ್ಡೀನ ಬಿಡತಿ| ಟೊಂಗಿಗೆ ನೀರ ಹಣಸ್ತಿ

ಗಿಡಾ ಚಿಗದ ಬರತೈತಂತ ಸುಳ್ಳ ಉಬ್ಬತೀ

ಮನೀಮಾರು ನನ್ನ ದಂತೀ ದೇಶದ ಗುರ್ತ ಇಲ್ಲವಂತಿ

ದೇಶಾಬಿಟ್ಟ ಮನೆ ಮಾರು ಎಲ್ಲಿ ತರತೀ

ದೇಶದಾಗ ಹುಟ್ಟತೀ ದೇಶದಾಗ ಬೆಳೀತಿ

ದೇಶದಾಗ ಬಾಳೇವ ಮಾಡಿ ಸತ್ತಹೋಗತೀ

ಮೈಯಾಗ ಎಣ್ಣೈತಿ| ಮಾರಿಮ್ಯಾಗ ಬಣ್ಣೈತಿ

ಮುದುಕಲ್ಲ ತದುಕಲ್ಲ ಹರೇವೈತಿ

ಕೊಳ ಪಡಶಾ ಮಾಡತಿ| ಗೂಳಿಹಾಂಗ ತಿರಗತಿ

ಉಡಾಳ ಮೂಳ ನಿನ್ನಿಂದು ಪ್ಯಾಗ್ ಯಾರಿಗೇನೈತಿ"[೮]

ಮೇಲಿನ ಪದ್ಯವು ಪರಪೀಡಕ, ನಿರರ್ಥಕ ಸ್ವಾರ್ಥಿಯೊಬ್ಬನ ವ್ಯಕ್ತಿ ಚಿತ್ರವನ್ನು ಬಿಂಬಿಸುತ್ತಲೇ, ಅವನ ಜೀವನವನ್ನು ವಿಡಂಬನೆ ಮಾಡುತ್ತಿದೆ. ಸ್ವಾತಂತ್ರ್ಯ ಹೋರಾಟಕ್ಕೆ ಅಣಿಗೊಳ್ಳಬೇಕಾದ ಸಂದರ್ಭದಲ್ಲಿ ಇಂಥ ಪದ್ಯಗಳ ಮೂಲಕ ಸ್ವಾರ್ಥಿಗಳ ಸುಪ್ತಚೇತನವನ್ನು ದೇಶಸೇವೆಗೆ ಜಾಗೃತಗೊಳಿಸುತ್ತಿರುವ ಒಳತೋಟಿಯನ್ನು ಸೂಕ್ಷ್ಮಾವಲೋಕನದಿಂದ ಗಮನಿಸಬೇಕು. "ಊರಾಗ್ಹರದಾಡತೀ ಬಡವರನ ಬೆದರಸತೀ" ಎಂಬ ಸಾಲುಗಳು ಪಾಳೇಗಾರಿಕೆ ಮಾಡುತ್ತ ಬ್ರಿಟಿಷರ ಚೇಲಾಗಳಾಗಿ ದೇಶದ್ರೋಹಿಗಳಂತೆ ವರ್ತಿಸುತ್ತಿದ್ದವರನ್ನು ಕುರಿತು ಹೇಳುತ್ತಲೇ "ಅಲ್ಲೇ ನಿನ್ನ ಸುಲಕೊಂಡ ಬಿಟ್ಟರ್‍ಯಾರಿಗ್ಹೇಳತೀ" ಎಂಬ ಎಚ್ಚರಿಕೆಯ ಘಂಟೆಯನ್ನೂ ಬಾರಿಸಿದ್ದಾರೆ. ಜನಶಕ್ತಿಯ ಮುಂದೆ ಎಲ್ಲ ಶಕ್ತಿಗಳೂ ತಲೆಬಾಗುತ್ತವೆಂಬ ಸಂದೇಶವೂ ಇಲ್ಲಿ ರವಾನೆಯಾಗಿದೆ. 'ಟೊಂಗಿಗೆ ನೀರಹಣಸ್ತಿ ಗಿಡಾ ಚಿಗದ ಬರತೈತಂತ ನೀರ ಹಣಸ್ತಿ ಮನೀಮಾರು ನನ್ನ ದಂತೀ ದೇಶದ ಗುರ್ತ ಇಲ್ಲವಂತಿ, ದೇಶಬಿಟ್ಟು ಮನೆ ಮಾರು ಎಲ್ಲಿ ತರತೀ' ಎನ್ನುವ

ಮೂಲಕ ದೇಶಾಭಿಮಾನವನ್ನು ಮೈಗೂಡಿಸಿಕೊಳ್ಳಲು ಕರೆಕೊಡುತ್ತ ಬ್ರಿಟಿಷರ ಬೆಳವಣಿಗೆ ದೇಶಕೇನೂ ಪ್ರಯೋಜನವಿಲ್ಲ ಅದು ಒಣಮರಕ್ಕೆ ನೀರೆರೆದಂತೆಯೇ ಸರಿ ಎಂದು ಹಾಡಿದ್ದಾರೆ. ಹೀಗೆ ಲಾವಣಿಗಳು ನಾಡು, ನುಡಿ, ಜನರ ಬವಣೆಗಳು, ಹೋರಾಟದ ವೃತ್ತಾಂತಗಳು, ಜನತೆಗೆ ನೀಡಬೇಕಾದ ಸಂದೇಶಗಳೆಲ್ಲವನ್ನೂ ಒಳಗೊಂಡಂತೆ ರಚನೆಯಾಗಿವೆ. ಇದರಿಂದಾಗಿ ಹೊಸಗನ್ನಡ ಕಾವ್ಯದ ಆರಂಭವು ಆಧುನಿಕ ಕನ್ನಡ ಕಾವ್ಯದ ಹೆಬ್ಬಾಗಿಲನ್ನು ತೆರೆಯಲು ಸುವರ್ಣಾವಕಾಶವನ್ನು ಕಲ್ಪಿಸಿದೆ. ಅನಾಮಧೇಯ ಜನಪದರು ಅಗಣಿತ ಲಾವಣಿಗಳನ್ನು ರಚಿಸಿ ಎಲೆಮರೆ ಕಾಯಿಯಂತೆ ಕಣ್ಮರೆಯಾಗಿದ್ದಾರೆ.

**೩. ರಂಗಭೂಮಿಯ ಹಾಡುಗಳು**

ಇಪ್ಪತ್ತನೇ ಶತಮಾನದಲ್ಲಿ "ರಚಿತವಾದ ಅನೇಕ ಹಾಡುಗಳಿಗೆ ಜಾನಪದ ರಂಗಭೂಮಿಯು ಪ್ರಮುಖ ಪ್ರೇರಣೆಯನ್ನು ಒದಗಿಸಿತು. ಆ ಕಾಲದಲ್ಇಲ ರಚಿತವಾದ ಪೌರಾಣಿಕ ನಾಟಕಗಳು ಇಂಥ ಹಾಡುಗಳನ್ನು ಒಳಗೊಂಡಿವೆ"[೯] ರಂಗಭೂಮಿ ನಾಟಕಗಳನ್ನು ರಚನೆ ಮಾಡುತ್ತಿದ್ದ ಕವಿಗಳು ಹಾಡುಗಳಿಂದಾಗಿಯೇ ನಾಟಕದ ಬಹುಭಾಗವನ್ನು ಮೀಸಲಿಡುತ್ತಿದ್ದರು. ಚುರಮುರಿ ಶೇಷರಾಯರು ತಮ್ಮ ಶಾಕುಂತಲ ನಾಟಕದಲ್ಲಿ ೮೦ ಹಾಡುಗಳನ್ನು ರಚಿಸಿರುವುದು ಕಂಡುಬರುತ್ತದೆ. ಇಲ್ಲಿ ಪ್ರತಿಯೊಂದು ಹಾಡಿನ ರಾಗ, ತಾಳ, ಪಲ್ಲವಿಯನ್ನು ಪರಿಚಯ ಮಾಡಿಕೊಡಲಾಗಿದೆ. ರಂಗಭೂಮಿಯ ಹಾಡುಗಳು ಹೊಸಗನ್ನಡದ ಪ್ರೇಮಕವನಗಳಂತಿವೆ. ಕೆ.ಎಸ್.ನರಸಿಂಹಸ್ವಾಮಿಯವರ ಪ್ರೇಮ ಕವನಗಳು ಇದೇ ರೀತಿಯ ಮೆಟ್ಟುಗಳನ್ನು ಹೊಂದಿರುವುದು ಕಾಕತಾಳೀಯವಾದರೂ ವಾಸ್ತವ, ನಾಟಕದಲ್ಲಿ ಸ್ತ್ರೀ-ಪುರುಷ ಪಾತ್ರಗಳ ನಡುವಿನ ಸಂಭಾಷಣೆ, ಸ್ತ್ರೀಪಾತ್ರಗಳ ತೊಳಲಾಟ, ಸಖಿಯರೊಡನೆ ಒಡನಾಟ, ಅವ್ಯಕ್ತ ಭಾವನೆಗಳ ಅಭಿವ್ಯಕ್ತಿ, ಸ್ತ್ರೀಪಾತ್ರಗಳ ಭಾವನಾತ್ಮಕ ಸಂವೇದನೆಗಳು, ವೇಶ್ಯೆಯರ ಬಳಲಿಕೆಗಳು ಹಾಡುಗಳ ರೂಪದಲ್ಲಿ ಅಧಿಕವಾಗಿ ರಚನೆಯಾಗಿವೆ. ಅವುಗಳಲ್ಲಿ ಕೆಲವನ್ನು ಆಯ್ದುಕೊಡಲಾಗಿದೆ. ಈ ಕೆಳಗೆ ನೋಡೋಣ

ಪುರುಷ ಪಾತ್ರಧಾರಿಯು ತನ್ನ ಕನ್ಯೆಯನ್ನು ಕುರಿತು

"ಮುದ್ದುಬಾಲೆ ಬಾರೆ ಬಾರೆ ಬಾ

ನಿನ್ನ ಮುಖದ ಲಾವಣ್ಯವನ್ನು ನೋಡಿ

ಹುಣ್ಣಿಮೆ ದೊರೆಯು ಸಣ್ಣನಾಗಿ ಶಿವನನ್ನು ಸೇರಿದಾ.

ಬಾಲೆಯೇನೂ ಹತ್ತಿರ ಬರುತ್ತಾಳೆ. ಆದರೆ ಅನ್ಯ ಸ್ತ್ರೀಯರ ಮಧ್ಯದಲ್ಲಿ ಅವನನ್ನು ಕಂಡು ಹೋಗಿ ಬಿಡುತ್ತಾಳೆ.

ಹರಹರಾ ಆದರಿಸದಾದೆ

ಸ್ತ್ರೀ ಸಮೂಹದೊಳೆನ್ನ ಕಾಣುತ್ತ

ಸರಿದಳೆತ್ತಲೊ ರೋಷದಿ

ಆದರೆ ಅದು ಕ್ಷಣಿಕ ಮತ್ತೊಮ್ಮೆ, ಆಕೆ ಸುಳಿದಾಗ:-

ತಿರುಗಲಿಲ್ಲೆನ್ನ ಮನ ವನಿತೆಯ ಬಳಿಗ್ಹೋಗೀ

ಮರುಗಿ ಮರುಗಿ ಮರುಗೀ ದಣಿದೆ ನಾನಿದಕಾಗೀ

ಎಂದು ಕೊಳ್ಳುತ್ತಾನೆ. ಕೊನೆಗೊಮ್ಮೆ, ಆಕೆಯ ಹತ್ತಿರ ಬಂದು ತೋರಿದ ಮಮತೆಯ ಕುಹುಹು ಮರೆಯದಂತಹುದು:-

ಮರೆಯಲಾರೆನೆ ಮಮತೆ ಮರೆಯಲಾರೆನೆ

ಮರೆಯಲಾರೆ ಮದುವೆಯೊಳಗೆ

ನೆರೆದವರೊಳು ಸರಿದು ಬಂದು ತನ್ನ

ಬೆರುಳುಂಗುರದಲಿಂದು ಮುಸುಕು

ಮರೆಯಲಿ ಮುಖದಿರುಹಿದವಳ"[೧೦]

ಈ ಹಾಡುಗಳಲ್ಲಿ ಕಂಡು ಬರುವ ಭಾಷೆಯ ನವೀನವಾದುದು. ಹೊಸಗನ್ನಡ ಕಾವ್ಯದ ಆರಂಭಕ್ಕೆ ರಂಗಭೂಮಿಯ ಕೊಡುಗೆ ಅಪಾರವಾದುದೆಂಬುದನ್ನು ಇಲ್ಲಿನ ಪಾತ್ರಗಳ ಸಂಭಾಷಣೆಯು ಮೂಲಕ ಗುರುತಿಸಬಹುದು. ಹೊಸಗನ್ನಡ ಕಾವ್ಯ ಹಾಗೂ ರಂಗಭೂಮಿ ಹಾಡುಗಳ ನಡುವೆ ಅವಿನಾಭಾವ ಸಂಬಂಧವಿತ್ತು.

ಒಂದು ಹೆಣ್ಣು ತಾನು ಒಲಿದು ಬಂದು ತನ್ನವನಿಗಾಗಿ ಹಾತೊರೆಯುವ, ಮನದಾಳದಿಂಗಿತವನ್ನು ವ್ಯಕ್ತಪಡಿಸಲು ತುಡಿಯುವ ಸನ್ನಿವೇಶವನ್ನು ಕಾಣಬಹುದು.

"ಹೇಗಿರಲೆ ನಾನು, ಕಾಂತಾ ಎನಗೆ ಎರವಾದನೆ

ಸಣ್ಣವಳೆಂದೆನ್ನ ಬಣ್ಣಿಸಿ ಕರೆದೊಯ್ದು ಬಣ್ಣದ ಮಾತಾಡಿ ಪೋದನೆ,

ಬೆದರಬ್ಯಾಡೊ ಮದನ ಸುಂದರಾ

ಆ ಸಖಿಯ ಭಯದಿ

ಬೆದರ ಬ್ಯಾಡೊ ಪ್ರಿಯಾ ಚದುರೆಯ

ಕಡೆಯವರು ಎನ್ನ

ಸದನ್ಮದ ಕಡೆ ಸುಳಿಯುದಿಲ್ಲಾ

ಮದನ ಕದನದೊಳು ಮನದಿ

ಬೆಳಗಾದ ಮ್ಯಾಲೆ ಬ್ಯಾಸರಿಸುವುದೊಳಿತೆ ಸುಂದರಾ

ಮೋಹಾಬ್ಬಿ ಚಂದಿರಾ"[22]

ಇಲ್ಲಿ ಪ್ರಿಯತಮೆಯ ಸರಸದ, ಕಟಕಿಯ ಹಾಡುಗಳು ಕಂಡುಬರುತ್ತವೆ. ವಿನೋದವೂ, ವಿಷಾದವೂ, ಇರುವಂಥ ಹಾಡುಗಳು ರಂಗಭೂಮಿಯಲ್ಲಿ ಸ್ಥಾನಪಡೆದಿವೆ. ನಾಟಕವೆಂದರೆ ಸಮಗ್ರಬದುಕಿನ ಸಮಷ್ಟಿ ಚಿತ್ರಣವಲ್ಲವೆ? ಹಾಗಾಗಿ ಸಾಮಾಜಿಕ ವ್ಯವಸ್ಥೆಯೊಳಗಿರುವ ಎಲ್ಲ ಪಾತ್ರಧಾರಿಗಳೂ ವೇದಿಕೆಯನ್ನು ಹಂಚಿಕೊಳ್ಳಬೇಕಾಗುತ್ತದೆ. ವೇಶ್ಯೆಯೊಬ್ಬಳು ತನಗೆ ಬಂದ ಪ್ರಾಪ್ತ ವಯಸ್ಸನ್ನೆ ಕಟಿಸುತ್ತಿರುವ ಪದ್ಯವು ಈ ರೀತಿ ಇದೆ.

"ಯಾಕೆ ಪ್ರಾಯವು ಬಂತವ್ವಾ?

ಚಿಕ್ಕವಳು ನಾ ಹ್ಯಾಗೆ ತಾಳಲೆ ಹೆತ್ತವ್ವಾ

ಮದಗಜಗಮನೆಯರು ಮಲಗುವ ವೇಳೆ

ಸದನಕೆ ಕರೆದೊಯ್ವರು"[23]

ಎಂದು ಸಂಕಟದಿಂದ ಹಾಡುವಾಗ ಪ್ರೇಕ್ಷಕರ ಮನಸ್ಸು ಕರಗಬೇಕಾದೀತು. ರಂಗಭೂಮಿಯ ಹಾಡುಗಳಲ್ಲಿ ನವರಸಗಳ ಸಂಗಮವು ಹೊರಹೊಮ್ಮಬೇಕು. ಹಾಸ್ಯ, ರೌದ್ರ, ಕರುಣ, ಶೃಂಗಾರ ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ ರಸಗಳು ಒಮ್ಮೆಯಾದರೂ ಪ್ರತೀರಸವು ರಂಗದ ಮೇಲೆ ಕಾಣಿಸಿಕೊಳ್ಳಬೇಕು. ಹಾಗಾಗಿ ರಂಗಗೀತೆಗಳು ಸರ್ವಗ್ರಾಹ್ಯಗಳಾಗಿರುತ್ತವೆ.

### ೪. ವರ್ಣನಗೀತೆಗಳು

ಯಾವುದೇ ಸೃಜನಶೀಲ ಬರಹಗಾರನಿಗಾದರೂ ತಾನು ನೆಲೆಸಿರುವ ಪರಿಸರ, ತನ್ನ ಸುತ್ತಲಿನ ಬದುಕು ಪ್ರಭಾವ ಬೀರಿಯೇ ತೀರಬೇಕು, ತನ್ನ ದೇಶ ಹಾಗೂ ಭಾಷೆಯ ಬಗ್ಗೆ ಪ್ರತಿಯೊಬ್ಬ ಕವಿಗೂ ಅಭಿಮಾನವಿರುತ್ತದೆ. ತನ್ನ ಅಭಿಮಾನವನ್ನು ಕವಿಯು ಕಾವ್ಯದ ಮೂಲಕ ವ್ಯಕ್ತಪಡಿಸುತ್ತಾನೆ. ಪ್ರಾಣಿ, ಪಕ್ಷಿ, ಸಸ್ಯ, ಕೀಟ, ಭೂಮಿ, ಆಕಾಶ, ಮಳೆ, ಮೋಡ, ಸೂರ್ಯ, ಚಂದ್ರ, ಗಾಳಿ, ನದಿ, ಬೆಟ್ಟ ಮುಂತಾದವುಗಳನ್ನು ಕುರಿತು ಕಾವ್ಯ ರಚಿಸಲು ಕವಿ ಮನಸ್ಸು ತುಡಿಯುತ್ತದೆ. ಪ್ರಕೃತಿ ಹಾಗೂ ಸುತ್ತಲಿನ ಪರಿಸರ ವರ್ಣನೆಯು ಪ್ರಾಚೀನ ಕಾಲದಿಂದಲೂ ಕಾವ್ಯ ರಚನೆಯಲ್ಲಿ ಸ್ಥಾನ ಪಡೆದಿದೆ. ಹೊಸಗನ್ನಡ ಕಾವ್ಯದ ಆರಂಭದಲ್ಲಿ ಕ್ರೈಸ್ತಮಿಷನರಿಗಳು ಹಾಗೂ ದೇಶೀಯ ಕವಿಗಳು ವರ್ಣನಗೀತೆಗಳನ್ನು ರಚಿಸಿದರು.

ಎ.ಗ್ರೇಟರ್ ಎಂಬ ಕ್ರೈಸ್ತ ಮಿಷನರಿಯು ತನ್ನ ಕಾರ್ಯಕ್ಷೇತ್ರ ಕೊಡಗನ್ನು ಕುರಿತು ಅಭಿಮಾನದಿಂದ ಬಣ್ಣಿಸಿರುವುದನ್ನು ಈ ಪದ್ಯದಲ್ಲಿ ಗಮನಿಸಬಹುದು.

೧. "ಕೊಡಗು ದೇಶವು

ಎಷ್ಟೊ ಚಂದವಾದುದು

ಬೆಟ್ಟ ಬೆಟ್ಟ ತುದಿಯೇ

ಮಲೆನಾಡು ತೀರವೇ

ನೀಲಬಣ್ಣ ಕಡಲು

ಸುತ್ತು ಮುತ್ತು ಕಾಣ್ಬುದು'

೨. 'ನದಿ ಮರಳೋಲಿಗೆ

ನೆಲ್ಲು ಗದ್ದೆಯಲ್ಲದೆ

ಗಂಧ ಕಾಪಿ ಯಾಲಕಿ

ಬಾಳೆ ಕಿತ್ತೆ ಬಗಿನಿ

ಬೆಟ್ಟದಲ್ಲಿ ಹುಟ್ಟೊದು

ಜೇನು ತುಪ್ಪ ಬಲುವು'

೩. 'ಬೆಟ್ಟ ಕಾಡಿನೊಳಗೆ

ಆನೆ ಕಾಟಿ ಕಡವ

ನರಿ ಪುಲಿ ಕರಡಿ

ಕಾಡುಪಂದಿ ಕುರೆಂಗಿ

ಮನೆ ಕೊಟ್ಟೆ ಹತ್ತಿರ

ಕರು ದನ ಪುಷ್ಕಲ"[೧೩]

ಮೇಲಿನ ಪದ್ಯಗಳಲ್ಲಿ ಮೋದಲನೆಯದು ಕೊಡಗಿನ ಪ್ರಕೃತಿ ಸೌಂದರ್ಯದ ಹಿರಿಮೆಯನ್ನು ಕುರಿತದ್ದಾದರೆ ಎರಡನೆಯದು ಅಲ್ಲಿನ ತೋಟದ ಬೆಳೆಗಳು, ಹಣ್ಣಿನ ಮರಗಳನ್ನು ಕುರಿತು, ಮೂರನೆ ಪದ್ಯವು ಕೊಡಗಿನ ತಪ್ಪಲುಗಳಲ್ಲಿ ವಾಸವಾಗಿರುವ ವನ್ಯಮೃಗಗಳು ಹಾಗೂ ಮನೆಯಲ್ಲಿರುವ ಸಾಕು ಪ್ರಾಣಿಗಳನ್ನು ಕುರಿತು ಹೇಳಿದೆ. ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳನ್ನು ಗುರುತಿಸುವಾಗ ಹಲವಾರು ಕವಿತೆಗಳು ಕಾಣಸಿಗುತ್ತವೆ.

ಕೆಲವೆಡೆ ಕಾವ್ಯವು ಮಹತ್ವ ಪಡೆಯದೆ ಪ್ರಾಸವು ಮೇಲುಗೈ ಸಾಧಿಸಿ ಪದ್ಯದ ಬಂಧ ಶಿಥಿಲವಾಗಿರುವ ಸನ್ನಿವೇಶಗಳು ಕಂಡುಬರುತ್ತವೆ. ನಾಯಿಯನ್ನು ಕುರಿತು ವರ್ಣಿಸುವ ಪದ್ಯವು ಇದಕ್ಕೊಂದು ನಿದರ್ಶನ.

"ಒಂದು ನಾಯಿಯು ತನ್ನ ಬಾಯೊಳು
ಚಂದವಾಗಿರ್ದೊಂದು ರೊಟ್ಟಿಯ
ಅಂದದಿಂದಲಿ ಕಚ್ಚಿಕೊಂಡು ಹೊಳೆಯ ದಾಟುತಿರೆ
ಸಂದ ನೆರಳವ ಕಂಡು ಇದು ಮ
ತ್ತೊಂದು ಸೊಣಗನು ಯಿದರ ಬಾಯೊಳ
ಗಿಂದ ಕಸಗೊಳಬೇಕು ರೊಟ್ಟಿಯನೆಂದು ಬಗೆಯುತ್ತ
ಕೆಟ್ಟಮನಶಿನ ನಾಯಿ ತನ್ನೊಳು
ಹುಟ್ಟಿದಂಥಾ ಶಿಟ್ಟಿನಿಂದಲಿ
ಪಟ್ಟನೇ ಬಾಯ್ದೆರೆದು ನೀರೊಳು ಮೋರೆ ಮುಳುಗಿಸಿತು
ಅಷ್ಟರಲಿ ಬಾಯಿಯ ರೊಟ್ಟಿ ತಳಕೇ
ಮುಟ್ಟಿ ಹೋಯಿತು ಮನದ ಆಸೆಯು
ಕಿಟ್ಟಿ ತಂಣಾ ಪೇಳ್ವುದೇನತ್ಯಾಶೆ ಬಹು ಕೆಡಕು"[೧೪]

ಈ ಪದ್ಯದಲ್ಲಿ ಅನವಶ್ಯಕ ಪದಗಳನ್ನು ತುರುಕಿರುವುದು ಕಂಡುಬಂದರೂ ಹೊಸ ಪ್ರಯೋಗದ ಸಂದರ್ಭಗಳಲ್ಲಿ ಇದೆಲ್ಲ ಸಹಜ. ಇಂತಹ ಪ್ರಯೋಗಗಳಿಂದ ಹೊಸಗನ್ನಡ ಕಾವ್ಯಕ್ಕೆ ಹೆಚ್ಚು ಲಾಭವಾಗಿರುವುದು ಸತ್ಯ, ಹಲವು ತಪ್ಪುಗಳಿಂದ ಎಚ್ಚೆತ್ತು ಸಾವರಿಸಿಕೊಂಡು ವಿಜಯದ ನಗೆ ಬೀರುವಂತೆ ಹೊಸಗನ್ನಡ ಕಾವ್ಯದ ಆರಂಭದಲ್ಲಿ ಉಂಟಾದ ಇಂಥ ಕೆಲವು ತಪ್ಪುಗಳನ್ನು ತರುವಾಯ ಸರಿಪಡಿಸಿಕೊಂಡು ಕನ್ನಡಕಾವ್ಯ ಶ್ರೀಮಂತಿಕೆಯನ್ನು ನಿರಂತರವಾಗಿ ಮಾಡಲಾಯಿತು.

**೫. ನಾಟಕಗಳು**

ಕನ್ನಡದಲ್ಲಿ ನಾಟಕ ಪರಂಪರೆಯ ಉಗಮವು ತಡವಾಯಿತು. ಅದಕ್ಕೆ ಕಾರಣ ಕನ್ನಡಿಗರಲ್ಲಿ ನಾಟಕದ ಬಗ್ಗೆ ಇದ್ದ ತಿರಸ್ಕಾರ ಮನೋಭಾವವೇ ಕಾರಣ. ರನ್ನನಲ್ಲಿ ನಾಟಕೀಯತೆ ಕಂಡುಬಂದರೂ ಪೂರ್ಣವಾಗಿ ನಾಟಕ ಕೃತಿಯೊಂದು ರಚನೆಯಾದದ್ದು ಮೈಸೂರು ಸಂಸ್ಥಾನದ ಸಿಂಗರಾರ್ಯನಿಂದ (ಮಿತ್ರಾವಿಂದಗೋವಿಂದ). ಇದೂ ಕೂಡ ಸಂಸ್ಕೃತದ 'ರತ್ನಾವಳೀ' ನಾಟಕದ ಅನುವಾದವಾಗಿದ್ದು ಹದಿನೇಳನೇ ಶತಮಾನದಲ್ಲಿ. ಹತ್ತೊಂಬತ್ತನೇ ಶತಮಾನದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ನಾಟಕ

ಶಾಲೆಯೊಂದನ್ನು ತೆರೆದು ನಾಟಕಗಳನ್ನು ರಚಿಸಲು ಉತ್ತೇಜನ ನೀಡಿದರು. ಯಕ್ಷಗಾನ ಕೃತಿಗಳೂ, ರಂಗಭೂಮಿ ನಾಟಕಗಳು, ಸಂಸ್ಕೃತ ಮತ್ತು ಇಂಗ್ಲಿಷ್ ನಾಟಕಗಳ ಕನ್ನಡಾನುವಾದ ಆಗಿ ಮೈಸೂರು ಸಂಸ್ಥಾನದಲ್ಲಿ ಅಧಿಕವಾಗಿ ಪ್ರದರ್ಶನಗೊಳ್ಳತೊಡಗಿದವು.

ಸಂಸ್ಕೃತದ ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕವನ್ನು ಚುರುಮುರಿ ಶೇಷರಾಯರು ಪ್ರಥಮ ಬಾರಿಗೆ ಕನ್ನಡ ಭಾಷೆಗೆ ಅನುವಾದಿಸಿದರು. ಇದೇ ನಾಟಕವನ್ನು ಬಸಪ್ಪ ಶಾಸ್ತ್ರಿಗಳು ಕನ್ನಡಿಸಿದರು. ಇವರಿಬ್ಬರ ಭಾಷಾಂತರ ಸಿದ್ದಿಯಲ್ಲಿ ಯಾರು ಹೆಚ್ಚು ಯಾರು ಕಡಿಮೆ ಎಂಬ ಚರ್ಚೆಯೂ ನಡೆಯಿತು. ಇವರಿಬ್ಬರೂ ತಮ್ಮ ಅನುವಾದ ಭಾಗಕ್ಕೆ ಪದ್ಯಶೈಲಿಯನ್ನೆ ಹೆಚ್ಚು ಆಯ್ಕೆ ಮಾಡಿಕೊಂಡು ವೃತ್ತ, ಕಂದ, ಷಟ್ಪದಿ ಛಂದೋಪ್ರಕಾರಗಳಲ್ಲಿ ನಾಟಕಗಳನ್ನು ರಚಿಸಿದ್ದಾರೆ.

ಉದಾಹರಣೆ:-

**೧. ಮೂಲ:** "ಆಪರಿತೋಷಾದ್ವಿದುಷಾಂನ ಸಾಧುಮನ್ಯೇ ಪ್ರಯೋಗ ವಿಜ್ಞಾನಂ

ಬಲವದಪಿ ಶಿಕ್ಷಿ ತಾನಾಂ ಆತ್ಮನ್ಯ ಪ್ರತ್ಯಯಂ ಚೇತಃ||(ನಾಂದೀ)

**ಶೇಷಗಿರಿರಾಯ:** ಕಾಂತೆ ಕೇಳೊರೆಯಂತ ಗಂತಿನ ಗಂತದಂತನನಾಂತವರ್

ಕುಂತು ಕೇಳುತಲಂತರಂಗದಿ ಸಂತಸಂ ತಳೆದಿಂದು ಪ್ರ

ತ್ಯಂತರಂ ಬರುವಂತಿನಿಂ ತಲೆದೂಗುವಾ ಪರಿಯಂತರಂ

ನಾ ತಳೆದೀಹೆ ಶಂಕೆ ಸದ್ಗುಣವಂತನಾಂ ತದನಂತರಂ

**ಬಸವಪ್ಪ ಶಾಸ್ತ್ರಿ:** ರಸಿಕರ್ಕಳೊಪ್ಪುವನ್ನಂ

ರಸಾಭಿನಯ ಕೌಶಲಂಗಳೊಳ್ಳಿದು ವೆನುತಾ

ನುಸಿರೆಂ ವಲಮೋದಿದ ಮಾ

ನಿಸರ್ಗಂ ತಮ್ಮೊಳಗೆ ತಮಗೆ ನಂಬುಗೆಯಲ್ಲಿಂ||" [೧೫]

ಈ ಪದ್ಯಗಳನ್ನು ಗಮನಿಸಿದಾಗ ಭಾಷೆಯಲ್ಲಿ ಹೊಸತನ ಕಂಡು ಬಂದರೂ ಪದ್ಯರಚನೆಯಲ್ಲಿ ಛಂದೋ ನಿಯಮಗಳಿಗೆ ಕಟ್ಟು ಬಿದ್ದಿರುವುದು ಎದ್ದುಕಾಣುತ್ತಿದೆ. ಆದರೂ ಕೂಡ ನಾಟಕ ರಚನೆಯ ಮೂಲ ಹೊಸಗನ್ನಡ ಕಾವ್ಯಕ್ಕೆ ಪ್ರಾತಿನಿಧ್ಯತೆ ಲಭಿಸಿತು. ಇಲ್ಲಿ "ಶೇಷಗಿರಿರಾಯರ ಅನುವಾದವು ಮೂಲದಕ್ಕಿಂತ ವಿಸ್ತಾರವಾಗಿದೆ ಅತಿಯಾದ ಗಮಕಪ್ರಾಸವು ಅರ್ಥಸುಭಗತೆಗೆ ಅಡ್ಡಿಯಾಗಿದೆ. 'ಕುಂತು' ಎಂಬ ಗ್ರಾಮ್ಯ ಪದವು ಇತರ ಪದಸರಣಿಯಲ್ಲಿ ಹೊಂದುವುದಿಲ್ಲ. ಬಸಪ್ಪಶಾಸ್ತ್ರಿಗಳ ಅನುವಾದದಲ್ಲಿ ಅರ್ಥಸ್ಪಷ್ಟತೆ ಪ್ರೌಢಿಮೆ ಮತ್ತು ಸಂಕ್ಷೇಪ-ಇವು ಎದ್ದು ಕಾಣುವಂತಿವೆ"[೧೬] ಶೇಷಗಿರಿರಾಯರು ದೀರ್ಘವಾದ

ವೃತ್ತದಲ್ಲಿ ರಚಿಸಿದ್ದರೆ, ಬಸವಪ್ಪ ಶಾಸ್ತ್ರಿಗಳು ಕಂದ ಪದ್ಯದಲ್ಲಿ ಸಂಕ್ಷಿಪ್ತವಾಗಿ ಅರ್ಥ ಪೂರ್ಣವಾಗಿ ರಚಿಸಿದ್ದಾರೆ. ಹೀಗೆ ಸಂಸ್ಕೃತ ನಾಟಕಗಳ ಕನ್ನಡಾನುವಾದದಿಂದಾಗಿ ಕನ್ನಡ ನಾಟಕಗಳ ಬೆಳವಣಿಗೆಯು ಕಾವ್ಯ ಪರಂಪರೆಯ ಅಭ್ಯುದಯಕ್ಕೆ ಕಾರಣವಾಯಿತು.

ಹತ್ತೊಂಬತ್ತನೇ ಶತಮಾನದಲ್ಲಿ ಇಂಗ್ಲಿಷ್ ಶಿಕ್ಷಣ ಹಾಗೂ ಸಾಹಿತ್ಯದ ಪ್ರಭಾವದಿಂದಾಗಿ ಇಂಗ್ಲಿಷ್‌ನ ಷೇಕ್ಸ್‌ಪಿಯರ್‌ನ ನಾಟಕಗಳನ್ನೂ ಅಭ್ಯಾಸ ಮಾಡುವ ಅವಕಾಶ ಕನ್ನಡಿಗರಿಗೆ ಒದಗಿಬಂತು. ಎ.ಆನಂದರಾಯ, ಎಂ.ಎಲ್.ಶ್ರೀಕಂಠೇಶಗೌಡ, ಎಂ.ಎಸ್.ಪುಟ್ಟಣ್ಣ, ಗುಂಡೋಕೃಷ್ಣ ಚುರಮುರಿ ಮುಂತಾದವರು ಇಂಗ್ಲಿಷ್‌ನ ಷೇಕ್ಷ್‌ಪಿಯರ್ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿ ರಂಗಭೂಮಿಯ ಮೇಲೆ ಪ್ರಯೋಗಿಸಲು ಅಣಿಯಾದರು. ಹಲವು ಭಾಷಾಂತರಕಾರರು ಇಲ್ಲಿಯೂ ಮಾರ್ಗೀಯ ಛಂಧೋನಿಯಮಗಳಿಗೆ ಕಟ್ಟು ಬಿದ್ದಿರುವುದು ಕಂಡು ಬರುತ್ತದೆ. ಕೆಲವೆಡೆ ಅನರ್ಥಗಳಿಗೆ, ಅಸಂಬದ್ಧತೆಗೆ, ಅಪರಿಪೂರ್ಣತೆಗೆ, ಗೊಂದಲಗಳಿಗೆ ಅವಕಾಶ ಉಂಟಾಗಿ ಮೂಲ ಪರಿಕಲ್ಪನೆಯನ್ನೇ ತಿರುಚಿರುವ ನಿದರ್ಶನಗಳ ಗೋಚರಿಸುತ್ತವೆ. ಈ ಗೊಂದಲಗಳಿಗೆ ಮೂಲ ಕಾರಣ ಬಲವಾಗಿ ನಿಯಂತ್ರಿಸುತ್ತಿದ್ದ ಸಂಪ್ರದಾಯನಿಷ್ಠೆ.

ಆನಂದರಾಯರು ರೋಮಿಯೋ-ಜೂಲಿಯಟ್ ನಾಟಕವನ್ನು 'ರಾಮವರ್ಮ-ಲೀಲಾವತಿ' ಎಂದೂ, ಮರ್ಚೆಂಟ್ ಆಫ್ ವೆನಿಸ್ ನಾಟಕವನ್ನು 'ಪಾಂಚಾಲಿ ಪರಿಣಯ' ಎಂದೂ, ಭಾಷಾಂತರಿಸಿದ್ದಾರೆ. ಶ್ರೀಕಂಠೇಶಗೌಡರು ಮ್ಯಾಕ್‌ಬೆತ್ ನಾಟಕವನ್ನೂ 'ಪ್ರಿತಾಪರುದ್ರದೇವ' ಎಂದೂ, ಮಿಡ್ ಸಮರ್ ನೈಟ್ ಡ್ರೀಮ್ಸ್ ನಾಟಕವನ್ನು 'ಪ್ರಮೀಳಾರ್ಜುನೀಯ' ಎಂದೂ ಅನುವಾದಿಸಿದ್ದಾರೆ. ಎಂ.ಎಸ್.ಪುಟ್ಟಣ್ಣ ಅವರು ಕಿಂಗ್‌ಲಿಯರ್ ನಾಟಕವನ್ನು 'ಹೇಮಚಂದ್ರ ರಾಜವಿಲಾಸ' ಎಂಬ ಹೆಸರಿನಿಂದ ಭಾಷಾಂತರ ಮಾಡಿದ್ದಾರೆ. ಒಥೆಲೋ ನಾಟಕವನ್ನು ಬಸಪ್ಪ ಶಾಸ್ತ್ರಿಗಳು ಹಾಗೂ ಗುಂಡೋ ಕೃಷ್ಣ ಚುರಮುರಿಯವರು ಪ್ರತ್ಯೇಕವಾಗಿ 'ಶೂರಸೇನಚರಿತೆ' ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. ಇಲ್ಲಿ ಅನುವಾದವಾಗಿರುವ ನಾಟಕಗಳು ಛಂದೋನಿಯಮಗಳಿಗೆ ನಿಷ್ಠವಾಗಿದ್ದು ಅಲ್ಲಲ್ಲಿ ವೃತ್ತ, ಕಂದ, ಷಟ್ಪದಿಗಳಲ್ಲಿ ರಚನೆಯಾಗಿವೆ.

" 'ಶೂರಸೇನ ಚರಿತೆ'ಯಲ್ಲಿ ಬರುವ ಒಂದು ಕಂದ ಪದ್ಯ ಈ ರೀತಿ ಇದೆ.

ಪರಿವ ನದಿ ಪಿಂದೆ ತಿರುಗದ

ಪರಿಯಿಂ ಪ್ರಳಯಾಗ್ನಿ ಸದೃಶವಹ ಮಹತ್ಕೋಪಂ

ದುರುಳೆ ನಡೆಯಿಸಿದ ಕೃತ್ಯಕೆ

ಸರಿಯಾದುದ ಮಾಡದೆಂತು ಶಾಂತಮೆನಿಕ್ಕುಂ"[12]

ಈ ಪದ್ಯದಲ್ಲಿ ಸಂಸ್ಕೃತ ಹಾಗೂ ಕನ್ನಡ ಗ್ರಾಮ್ಯ ಶಬ್ದಗಳ ಸಂಮಿಶ್ರಣವಿದೆ. ಆದರೂ ಹೊಸಗನ್ನಡ ಭಾಷೆಯ ಹೊಳಹುಗಳು ಸ್ಪಷ್ಟವಾಗಿ ನಮಗೆ ಕಾಣಿಸಿಗುತ್ತವೆ.

ಹೊಸಗನ್ನಡ ಕಾವ್ಯಘಟ್ಟದ ಆರಂಭವು ಸೃಜನಶೀಲ ಬರವಣಿಗೆಗಿಂತ ಭಾಷಾಂತರ ರೂಪಗಳೇ ಅಧಿಕ. ಕ್ರೈಸ್ತಮಿಷನರಿಗಳು ಕ್ರೈಸ್ತಮತ ಪ್ರಚಾರಮಾಡುವ ಸುವಾರ್ತೆಗಳು, ಗೀತೆಗಳು ಹಾಗೂ ಕೀರ್ತನೆಗಳನ್ನು ಕನ್ನಡಕ್ಕೆ ಭಾಷಾಂತರಗೊಳಿಸುತ್ತಿದ್ದರು, ಆರಂಭಕಾಲದ ಕೆಲ ಮಿಷನರಿಗಳು ಮಾರ್ಗೀಯ ಛಂದೋನಿಯಮಗಳಿಗೆ ಕಟ್ಟುಬಿದ್ದರೆ ನಂತರದ ಮಿಷನರಿಗಳು ಅದನ್ನು ಮೆಟ್ಟಿನಿಲ್ಲುವ ದಿಟ್ಟತನ ತೋರಿದ್ದಾರೆ. ಇಂತಹ ಬೆಳವಣಿಗೆಗಳು ಕನ್ನಡ ಕಾವ್ಯಕೃಷಿಗೆ ಹೊಸ ಹಾದಿಯನ್ನು ಕಲ್ಪಿಸಿವೆ. ಮೈಸೂರು ಸಂಸ್ಥಾನವು ಇಂಥ ಬೆಳವಣಿಗೆಗೆ ಇಂಬು ನೀಡತೊಡಗಿತು. ಹೊಸ ಛಂಧೋನಿಯಮಗಳನ್ನು ಕವಿಯು ಶೋಧಿಸಿದನು. ಹಟ್ಟಂಗಡಿ ನಾರಾಯಣರಾಯರು ತಮ್ಮ 'ಆಂಗ್ಲ ಕವಿತಾವಳಿ'ಯಲ್ಲಿ ಪರಂಪರೆ ಮತ್ತು ಹೊಸತನಗಳ ಮಧ್ಯೆ ಸಿಲಿಕಿರುವುದು ಕಂಡು ಬಂದರೆ ಹೊಸಗನ್ನಡ ಕಾವ್ಯದ ಎಲ್ಲ ಮಜಲುಗಳನ್ನು ಹೊತ್ತು ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತೆಗಳು' ಎಂಬ ಕೃತಿ ಬೆಳಕು ಕಂಡಿತು.

ಕ್ರೈಸ್ತ ಮಿಷನರಿಗಳಿಂದ ರಚಿತವಾದ 'ಕಥಾಮಾಲೆ'ಯು ಹಾಡಿನ ರೂಪದಲ್ಲಿ ಮೈದಾಳಿವೆ. ಕಥನಗೀತೆಗಳೂ ಇವೆ. ಭಾಮಿನಿ, ವಾರ್ಧಕ ಷಟ್ಪದಿಯ ಪದ್ಯಗಳೂ ಇವೆ. ಇದೊಂದು "ಹೊಸಗನ್ನಡದ ಮೊದಲ ಖಂಡಕಾವ್ಯ"[೧೮] ಈ ಕಾವ್ಯವು ಕಿಟೆಲ್ ರಚಿಸಿರುವ ಕೆಲವು ಬಿಡಿ ಪದ್ಯಗಳನ್ನು ಒಳಗೊಂಡಿದೆ. ಈ ಕಾವ್ಯವು ಸಣ್ಣ ಸಣ್ಣ ವಾಕ್ಯಗಳಿಂದ ಕೂಡಿದ್ದು ಸರಳವಾದ ನಿರೂಪಣೆಯನ್ನು ಹೊಂದಿದೆ. ದಾಸಪಂಥದ ಕೀರ್ತನೆಗಳು ಕ್ರೈಸ್ತಮಿಷನರಿಗಳ ಮೇಲೆ ಪ್ರಭಾವ ಬೀರಿ ಕ್ರೈಸ್ತ ಕೀರ್ತನೆಗಳ ಉಗಮಕ್ಕೂ ಕಾರಣವಾಗಿರುವುದ ವಾಸ್ತವ. 'ಕಥಾಮಾಲೆ'ಯಂಥ ಖಂಡಕಾವ್ಯವು ಮುಂದೆ ಗೋವಿಂದ ಪೈ ಅವರ 'ಗೊಲ್ಗೊಥಾ' ಮತ್ತು 'ವೈಶಾಖ' ಕುವೆಂಪು ಅವರ 'ಚಿತ್ರಾಂಗದ' ಕಾವ್ಯಗಳಿಗೆ ಪ್ರೇರಣೆಯಾಗಿವೆ. ಪೈ ಅವರ ಅಪೂರ್ವವಾದ ಈ ಕೃತಿಗಳು ನಿತ್ಯನೂತನವಾದವುಗಳು. 'ಗೊಲ್ಗೊಥಾ'ಯೇಸುವನ್ನೂ 'ವೈಶಾಖ' ಬುದ್ಧನನ್ನು ಕುರಿತು ರಚನೆಯಾಗಿರುವ ಎರಡೂ ಕಾವ್ಯಗಳ ವಸ್ತು ತೀರ ಹೊಸತನದಿಂದ ಕೂಡಿದೆ. ಇಲ್ಲಿ ಕವಿ ಮತಪ್ರಚಾರಕ್ಕೆ ಕಟ್ಟು ಬೀಳದೆ ಮಹಾತ್ಮರ ಸಾವಿನ ಅರ್ಥಪೂರ್ಣತೆಯನ್ನು ಸಮರ್ಥಿಸುವುದರಲ್ಲಿ ಹೊಸತನ ಕಾಣುತ್ತದೆ.

ಈ ಕನ್ನಡದಲ್ಲಿ ಕಾವ್ಯದ ವಸ್ತು, ಛಂದಸ್ಸು, ಭಾಷೆ ಭಾವ ಎಲ್ಲದರಲ್ಲಿಯೂ ಹೊಸತನದ ಚಿಗುರೊಡೆಯಿತು. ಮುದ್ದಣ ಇದಕ್ಕೆ ಚಾಲನೆ ನೀಡಿ ಹೊಸಗನ್ನಡ ಕಾವ್ಯದ ಮುಂಗೋಳಿ ಎಂದು ಕರೆಯಲ್ಪಟ್ಟನು. ಹತ್ತೊಂಬತ್ತನೇ ಶತಮಾನದ ಕೊನೆಯ ಭಾಗದಲ್ಲಿ ಕೆಲವು ಕವಿಗಳು ಹೊಸತನದ ಕಾವ್ಯರಚನೆಗೆ ಕಂಕಣಬದ್ದರಾದಂತೆ ಕಂಡು ಬಂದಿತು. ಆದರೆ ಛಂದೋನಿಯಮಗಳನ್ನು ಮೀರುವಲ್ಲಿ ಆರಂಭದ ಕವಿಗಳು ಮೀನಾಮೇಷ ಎಣಿಸತೊಡಗಿದರು. "ಎಸ್.ಜಿ.ನರಸಿಂಹಾಚಾರ್, ಪಂಜೆ ಮಂಗೇಶರಾಯರು, ಗೋವಿದ ಪೈ, ಹಟ್ಟಂಗಡಿ ನಾರಾಯಣರಾಯರು, ಜಯರಾಮಾಚಾರ್ಯ, ಶಾಂತಕವಿ ಮೊದಲಾದವರು ಹೊಸ ಕವಿತೆಗೆ ಹಳೆಯ ಛಂದೋರೂಪಗಳನ್ನೆ ಬಳಸಿಕೊಂಡರು."[೧೯] ಆದರೆ ಗೋವಿಂದ ಪೈ ಅವರು ಪ್ರಾಸತ್ಯಾಗ ನಿರ್ಧಾರವು ಹೊಸಗನ್ನಡ ಕಾವ್ಯದ ಇತಿಹಾಸದಲ್ಲಿ ಅತ್ಯಂತ ಮಹತ್ವಪೂರ್ಣವಾದುದು. ಇದರ ತರುವಾಯ ಬಿ.ಎಂ.ಶ್ರೀಯವರು ಹೊಸಗನ್ನಡ ಕಾವ್ಯದ ಕಹಳೆಯನ್ನು 'ಇಂಗ್ಲಿಷ್ ಗೀತೆಗಳು' ಮೂಲಕ ಮೊಳಗಿಸಿದರು. ಇಂಗ್ಲಿಷ್ ಮತ್ತು ಸಂಸ್ಕೃತ ಸಾಹಿತ್ಯಗಳಲ್ಲಿ ಕಂಡುಬರುವ

ದೋಷಗಳನ್ನು ದಾಟುವುದು ಒಳಿತು. ಕಾವ್ಯ ರಚಿಸುವಾಗ ವಸ್ತು, ಭಾಷೆ, ಭಾವ, ಶೈಲಿ, ಸ್ವರೂಪ, ಮುಂತಾದವುಗಳಿಗೆ ಸಂಬಂಧಿಸಿದಂತೆ ಕಂಡು ಬರುವ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸ್ಕರಿಸಬೇಕು ಎಂದು ಬಯಸಿ ಹೊಸಗನ್ನಡ ಕಾವ್ಯದ ರಚನೆಗೆ ಸ್ವತಂತ್ರ ಹಾದಿಯನ್ನು ನಿರ್ಮಿಸಿದರು. ತರುವಾಯ ಆಂಗ್ಲ ಸಾಹಿತ್ಯ ಪ್ರಕಾರಗಳಾದ ಭಾವಗೀತೆ, ಕಥೆ, ಕಾದಂಬರಿ, ಪ್ರಬಂಧ, ನಾಟಕ, ಗೀತನಾಟಕ, ಆತ್ಮಕಥೆ, ದುರಂತನಾಟಕ ಮುಂತಾದವುಗಳು ತಡೆಯಿಲ್ಲದೆ ರಚನೆಯಾಗ ತೊಡಗಿ ಕನ್ನಡದಲ್ಲಿ ಆಧುನಿಕ ಕಾವ್ಯ ಪರಂಪರೆಗೆ ಭದ್ರ ತಳಹದಿ ಒದಗಿಸಿದಂತಾಯಿತು. ವಿವಿಧ ಮೂಲಗಳಿಂದ ಜನಧಾರೆಯು ಹರಿದು ಮುಂದೆ ನದಿಯಾಗಿ ಹರಿಯುವಂತೆ ಕನ್ನಡ ಕಾವ್ಯ ಪರಂಪರೆಯು ವಿವಿಧ ಪ್ರಕಾರಗಳಲ್ಲಿ ಮೈದಾಳಿದರೂ ಸಾಹಿತ್ಯ ಸಮೃದ್ಧಿಗೆ ವರಪ್ರಸಾದವಾಗಿಯೇ ಪರಿಣಮಿಸಿತು.



## ಅಡಿಟಿಪ್ಪಣಿ

೧. ಕನ್ನಡ ಸಾಹಿತ್ಯ ಚರಿತ್ರೆ, ಮೈ.ವಿ.ವಿ., ಪುಟ ೭೩೯.

೨. ಕನ್ನಡ ನವೋದಯ ಕಾವ್ಯ, ಮಂಗಳೂರು ಕೇಂದ್ರ, ಪುಟ ೧೪.

೩. ಹೊಸಗನ್ನಡ ಅರುಣೋದಯ, ಪುಟ ೩೮೬.

೪. ಹೊಸಗನ್ನಡ ಅರುಣೋದಯ, ಪುಟ ೩೯೦.

೫. ಹೊಸಗನ್ನಡ ಅರುಣೋದಯ, ಪುಟ ೩೯೨.

೬. ಹೊಸಗನ್ನಡ ಕಾವ್ಯ, ಪುಟ ೮.

೭. ಅದೇ, ಪುಟ ೮.

೮. ಅದೇ, ಪುಟ ೯.

೯. ಹೊಸ ಅರುಣೋದಯ, ಪುಟ ೩೭೬

೧೦. ಅದೇ, ಪುಟ ೩೭೭.

೧೧. ಅದೇ, ಪುಟ ೩೭೮.

೧೨. ಅದೇ, ಪುಟ ೩೭೮.

೧೩. ಅದೇ, ಪುಟ ೩೯೫.

೧೪. ಅದೇ, ಪುಟ ೩೯೬.

೧೫. ಅದೇ, ಪುಟ ೪೦೦.

೧೬. ಅದೇ, ಪುಟ ೪೦೦.

೧೭. ಅದೇ, ಪುಟ ೪೧೮.

೧೮. ಅದೇ, ಪುಟ ೩೯೧.

# ಅಧ್ಯಾಯ-೫

## ಹೊಸಗನ್ನಡದ ಆರಂಭದಲ್ಲಿ ಕಾವ್ಯಕೃಷಿ ಮಾಡಿದ ಕವಿಗಳು

## ಹೊಸಗನ್ನಡದ ಆರಂಭದಲ್ಲಿ ಕಾವ್ಯಕೃಷಿ ಮಾಡಿದ ಕವಿಗಳು

ಹೊಸಗನ್ನಡ ಕಾವ್ಯದ ಆರಂಭವನ್ನು ಇದಮಿತ್ಥಂ ಎಂದು ನಿರ್ಧರಿಸುವುದು ಕಷ್ಟಸಾಧ್ಯ. ಆದರೆ ಸಾಹಿತ್ಯದ ಸಂದರ್ಭದಲ್ಲಿ ಕೆಲವು ಮಾನದಂಡಗಳನ್ನಾ ಧರಿಸಿ ವಿದ್ವಾಂಸರು ಕಾವ್ಯದ ಉದಯಕಾಲವನ್ನು ಗುರುತಿಸುತ್ತಾರೆ. ಹಾ.ಮಾ.ನಾಯಕರು ಹೊಸಗನ್ನಡದ ಉದಯಕಾಲ ಕ್ರಿ.ಶ.೧೯೩೬ ಎಂದು ಗುರುತಿಸಿದರೆ, ಎಲ್.ಎಸ್.ಶೇಷಗಿರಿಯಾರು ಹತ್ತೊಂಬತ್ತನೇ ಶತಮಾನದ ಉತ್ತರಾರ್ಧ ಎಂದಿದ್ದಾರೆ (ಹೊಸಗನ್ನಡ ಸಾಹಿತ್ಯ ಚರಿತ್ರೆ) ಕನ್ನಡದ ಸಾಹಿತ್ಯ ಸಂದರ್ಭದಲ್ಲಿ ವಿಶಿಷ್ಟ ಎನಿಸುವ ಹೊಸತನದ ಹೊಳಹುಗಳು ವಚನಸಾಹಿತ್ಯ ಹಾಗೂ ದಾಸಸಾಹಿತ್ಯದಲ್ಲಿಯೇ ಗೋಚರಿಸುತ್ತವೆ. ಭಾಷಿಕ ದೃಷ್ಟಿಯಿಂದ ನೋಡುವುದಾದರೆ ಹನ್ನೆರಡನೇ ಶತಮಾನದಲ್ಲಿ ವಚನಕಾರರು ಸುಂದರ, ಸುಲಲಿತ, ಹೊಸತೆನಿಸುವ ಕನ್ನಡ ಭಾಷೆಯನ್ನು ಬಳಸಿದ್ದಾರೆ. ದಾಸ ಪಂಥೀಯರ ಕೀರ್ತನೆಗಳು, ಕನಕದಾಸರ ಕೃತಿಗಳು ಅದರ ಮುಂದುವರಿದ ಭಾಗದಂತೆಯೇ ಭಾಸವಾಗುತ್ತದೆ. ಆದರೆ ಇಲ್ಲಿನ ಕಾವ್ಯವು ಕಾಣದ ದೈವಿಶಕ್ತಿಯೊಡನೆ ಸಂಪರ್ಕಸಾಧಿಸಿ ಭಾಗವತ ಪರಂಪರೆಯನ್ನೆ ನೆನಪಿಸುವಂತಿದೆ. ದಾಸರ ಕೀರ್ತನೆಗಳು ಕ್ರೈಸ್ತಕೀರ್ತನೆಗಳಿಗೆ ಪ್ರೇರಣೆಯೊದಗಿಸಿರುವುದು ಸ್ಪಷ್ಟ. ಹೊಸಗನ್ನಡ ಕಾವ್ಯವು ಆರಂಭವಾದುದು ಎಂದಿನಿಂದ, ಅದನ್ನು ಉದ್ಧರಿಸಿದ ಕವಿಗಳು ಯಾರು? ಎಂಬ ವಿಚಾರವನ್ನು ಪರಿಶೀಲಿಸುವುದು ಅಗತ್ಯ.

### ೧. ಮುಮ್ಮಡಿ ಕೃಷ್ಣರಾಜ ಒಡೆಯರು (ಕ್ರಿ.ಶ.೧೮೧೧-೧೮೬೦)

ಹದಿನೆಂಟನೇ ಶತಮಾನದ ಆರಂಭಕ್ಕಿಂತ ಹಿಂದಿನ ಅವಧಿಯು ಸಾಹಿತ್ಯಿಕವಾಗಿ ಹೆಚ್ಚು ಪ್ರಗತಿ ಹೊಂದಲಿಲ್ಲ. ಮುಮ್ಮಡಿ ಕೃಷ್ಣರಾಜ ಒಡೆಯರು ಹಳೆಯ ಮತ್ತು ಹೊಸ ಯುಗಗಳ ಸಂಧಿಕಾಲದಲ್ಲಿ ಅಧಿಕಾರದ ಗದ್ದುಗೆ ಹಿಡಿದರು. ಸಾಹಿತ್ಯಾಸಕ್ತರಾಗಿದ್ದ ಇವರು ತಮ್ಮ ಅವಧಿಯಲ್ಲಿ ಕನ್ನಡ ನಾಡು-ನುಡಿಗಳ ಇತಿಹಾಸದಲ್ಲಿ ಮಹತ್ವದ ಮೈಲಿಗಲ್ಲನ್ನು ನಿರ್ಮಿಸಿದರು. ವಿವಿಧ ಆಸ್ಥಾನಗಳಿಂದ ಪಂಡಿತರು, ಕಲಾವಿದರು, ವಿದ್ವಾಂಸರನ್ನು ತಮ್ಮ ಆಸ್ಥಾನಕ್ಕೆ ಆಹ್ವಾನಿಸಿ ವಿದ್ವದ್ಗೋಷ್ಠಿ, ಪುರಾಣವಚನ, ಕಿರ್ತನೆಗಳ ಹಾಡುಗಾರಿಕೆ, ಯಕ್ಷಗಾನ ಪ್ರದರ್ಶನ, ಮುಂತಾದ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ನಡೆಯಲು ಅನುವು ಮಾಡಿಕೊಟ್ಟಿದ್ದರು. ಸಾಹಿತ್ಯದ ಬಗ್ಗೆ ಅಪಾರ ಆಸಕ್ತಿ ಹೊಂದಿದ್ದ ಕೃಷ್ಣರಾಜ ಒಡೆಯರು ಅರಮನೆಯಲ್ಲಿದ್ದ ಕಲ್ಲಿ ಅಚ್ಚುಕೂಟದಲ್ಲಿ ಅನೇಕ ಕನ್ನಡ ಹಾಗೂ ಸಂಸ್ಕೃತ ಪುಸ್ತಕಗಳನ್ನು ಸಚಿತ್ರವಾಗಿ ಮುದ್ರಿಸುತ್ತಿದ್ದರು. ಇವರ ಹೆಸರಿನಲ್ಲಿ ಸುಮಾರು ೧೯೦ ಕೃತಿಗಳು ಪ್ರಕಟಗೊಂಡಿವೆ. ದೇವತಾಸ್ತುತಿಗಳು, ಕೋಶ, ನಿಘಂಟು, ಗಣಿತ, ಜ್ಯೋತಿಷ್ಯ, ಕ್ರೀಡೆ, ಕತೆ, ಕವಿತೆ, ಪುರಾಣಟೀಕೆ, ನಾಟಕ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಕೃತಿಗಳು ರಚನೆಯಾಗಿವೆ.

'ಚಾಮುಂಡ ಲಘು ನಿಘಂಟು' ಎಂಬ ಕೃತಿಯು ಶ್ಲೋಕಗಳಲ್ಲಿದೆ 'ತತ್ವನಿಧಿ' ಎಂಬ ಶಾಸ್ತ್ರ ವಿಷಯಕ ಕೃತಿಯು ಸಂಸ್ಕೃತ ಭಾಷೆಯಲ್ಲಿದೆ. ಕನ್ನಡದಲ್ಲಿ ಟೀಕೆಯನ್ನು ಬರೆಯಲಾಗಿದೆ. ಹಲವು ಸೀಸಪದ್ಯಗಳನ್ನು ರಚಿಸಲಾಗಿದೆ. ಸೀಸಪದ್ಯಗಳ ಸ್ವರೂಪ ಹೊಸಗನ್ನಡ ರೂಪದಲ್ಲಿದೆ.

ಉದಾ:- "ಅವಿವೇಕದಲಿ ಮುಳುಗೆ ಕಪ್ಪೆಯಾಗುವ

ಚಾಡಿ ಹೇಳಿ ಜೀವಿಸೆ ಮತ್ಸ್ಯ ನಿವನೆ

ಯಹನು ಮದುವೆ ಕಂಟಕ ಬೆಕ್ಕು, ಚದುರೆ

ವಂಚನೆಯಿಂದ ಬದುಕೆ ನರಿಯಾಗುವನು

ಮತಿಯ ನೀಗಿ ಬದುಕೆ ಬಹುದಿನಗೂಬೆ"[೨]

ಹೀಗೆ ಹೊಸಗನ್ನಡದ ಸ್ವರೂಪವನ್ನು ಒಳಗೊಂಡಿರುವ ಕಾವ್ಯಗಳು ವಿವಿಧ ರೂಪಗಳಲ್ಲಿ ತಲೆಯೆತ್ತಿದವು. ಸೀಸೆಪದ್ಯ ಪ್ರಕಾರವು ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟ ಪದ್ಯಮಾಲಿಕೆ.

ಮುಮ್ಮಡಿ ಕೃಷ್ಣರಾಜ ಒಡೆಯರ ಅಂಕಿತದಲ್ಲಿ ರಚನೆಯಾಗಿರುವ ಕಾವ್ಯಗಳಲ್ಲಿ 'ಸೌಗಂಧಿಕಾ ಪರಿಣಾಯ'ವು ಅತ್ಯಂತ ಮಹತ್ ಹಾಗೂ ಬೃಹತ್ತಾದುದು. ಬಾಮಿನಿ ಷಟ್ಪದಿಯಲ್ಲಿರುವ ಈ ಗ್ರಂಥವನ್ನು ಆಧರಿಸಿ ನಾಟಕ ಹಾಗೂ ಸಾಂಗತ್ಯ ಕೃತಿಗಳೂ ರಚನೆಯಾಗಿವೆ. ಬೆಳ್ದಿಂಗಳನ್ನು ಕುರಿತು ಸಾಂಗತ್ಯವೊಂದರಲ್ಲಿ ಹೀಗೆ ವರ್ಣಿಸಲಾಗಿದೆ.

"ಹಾಲ ಚಲ್ಲಿದ ಚಂದದೊಳು ಪುಷ್ಪಬಾಣನ

ಬೀಳುವೆ ಬೂದಿಯ ತೆಱದಿ

ಮೂಱು ಲೋಕವ ತುಂಬಿ ತುಳುಕುತ ತೋಱಿತು

ಮೇಲಾದ ಬೆಳದಿಂಗಳಾಗ"[೩]

ಹೀಗೆ 'ಸೌಗಂಧಿಕ ಪರಿಣಯ' ಕಾವ್ಯವು ಹೊಸಗನ್ನಡ ಕಾವ್ಯದ ಆರಂಭದಲ್ಲಿ ತನ್ನದೇ ಆದ ಪ್ರಮುಖ ಸ್ಥಾನವನ್ನು ಪಡೆದಿದೆ. ಮೈಸೂರು ಸಂಸ್ಥಾನವು ಅದರಲ್ಲಿಯೂ ಮುಮ್ಮಡಿ ಕೃಷ್ಣರಾಜ ಒಡೆಯರ ಅಧಿಕಾರವಧಿಯು ಹೊಸ ಗನ್ನಡ ಕಾವ್ಯಕ್ಕೆ ಅಮೂಲ್ಯ ಅವಕಾಶಗಳನ್ನು ಕಲ್ಪಿಸಿಕೊಟ್ಟಿದೆ.

**೨. ಚಾಮರಾಜೇಂದ್ರ ಒಡೆಯರ ಕಾಲ (೧೮೮೧-೧೮೯೪)**

ಹೊಸಗನ್ನಡ ಸಾಹಿತ್ಯದ ಅರುಣೋದಯದ ಘಟ್ಟದಲ್ಲಿ ಚಾಮರಾಜೇಂದ್ರ ಒಡೆಯರ ಪಾತ್ರ ಮಹತ್ವ ಪೂರ್ಣವಾದುದು. ವಿದ್ಯಾಪಕ್ಷಪಾತಿಯಾಗಿದ್ದ ಒಡೆಯರು ಪ್ರಗತಿಪರ ದೃಷ್ಟಿಕೋನದಲ್ಲಿ ಪಾಶ್ಚಾತ್ಯ ಸುಧಾರಣೆಗಳನ್ನು ಮುಕ್ತಮನಸ್ಸಿನಿಂದ ಬರಮಾಡಿಕೊಳ್ಳುವಲ್ಲಿ ಯಶಸ್ವಿಯಾದರು. ಸ್ವತಃ ಸಾಹಿತಿಯಾಗದಿದ್ದರೂ ತಮ್ಮ ಕಾಲದಲ್ಲಿ ರಚನೆಯಾದ ಕೃತಿಗಳು ಬೆಳಕು ಕಾಣಲು ಕಾರಣರಾದರು. 'ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭೆ'ಯನ್ನು ಸ್ಥಾಪಿಸಿ ವಿವಿಧ ಭಾಷೆಯ ನಾಟಕ ಕೃತಿಗಳು ಕನ್ನಡಕ್ಕೆ ರೂಪಾಂತರಗೊಂಡು ರಂಗಭೂಮಿಯ ಮೇಲೆ ಪ್ರದರ್ಶನಗೊಳ್ಳಲು ಪ್ರೋತ್ಸಾಹ ನೀಡಿದರು. ಕನ್ನಡದಲ್ಲಿ

ಶಿಕ್ಷಣ ಮತ್ತು ಸಾಹಿತ್ಯವು ವ್ಯಾಪಕವಾಗಿ ಬೆಳವಣಿಗೆಯಾಗಲು 'ಕರ್ಣಾಟಕ ಭಾಷೋಜ್ಜೀವಿನೀ ಪಾಠಶಾಲೆ'ಯನ್ನು ಸ್ಥಾಪಿಸಿದರು. ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಬೆಳೆಸಿದರು.

ಚಾಮರಾಜೇಂದ್ರ ಒಡೆಯರ ಕಾಲದಲ್ಲಿದ್ದ ಪರಕಾಲಮಠದ ಯತಿಗಳಾದ ಕೃಷ್ಣಬ್ರಹ್ಮತಂತ್ರರು ಬಹುದೊಡ್ಡ ವಿದ್ವಾಂಸರಾಗಿದ್ದರು. ಇವರು ರಚಿಸಿದ 'ಕಲ್ಯಾಣಗೀತಮಂಜರಿ' ಎಂಬ ಗೀತ ಸಂಕಲನವನ್ನು ಮಹಾರಾಣಿ ಬಾಲಿಕಾ ಪಾಠಶಾಲೆಯ ವತಿಯಿಂದ ಪ್ರಕಟಿಸಲಾಯಿತು. ಭಾಗವತ ಕೃಷ್ಣಸ್ವಾಮಿ ಎಂಬ ಆ ಸ್ಥಾನ ಕವಿಯು ಯೋಗ ಮತ್ತು ಜ್ಯೋತಿಷಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು. ಭಾಗವತನವನ್ನು ಪದ್ಯರೂಪದಲ್ಲಿ ಸಂಕ್ಷೇಪಿಸಿ ರಚಿಸಿದರು. ನಂಜನಗೂಡಿನ ಸುಬ್ಬಾಶಾಸ್ತ್ರಿಯವರು ಸೀತಾಚರಿತ್ರೆಗೆ ಸಂಬಂಧಿಸಿದ ಕಾವ್ಯಗಳನ್ನೂ ರಚಿಸಿದರು. ಸಂಸ್ಕೃತದ ಮೃಚ್ಛಕಟಿಕ ಹಾಗೂ 'ಮಾಳವಿಕಾಗ್ನಿಮಿತ್ರ' ನಾಟಕಗಳನ್ನು ಪದ್ಯರೂಪದಲ್ಲಿ ಕನ್ನಡೀಕರಿಸಿ ರಂಗಪ್ರಯೋಗಕ್ಕೆ ಅವಕಾಶ ಕಲ್ಪಿಸಿಕೊಟ್ಟದ್ದು ಸುಬ್ಬಾಶಾಸ್ತ್ರಿಗಳ ಅತ್ಯಮೂಲ್ಯ ಕೊಡುಗೆ. ಇವರ ಮಕ್ಕಳಾದ ಅನಂತನಾರಾಯಣಶಾಸ್ತ್ರಿ ಹಾಗೂ ಶ್ರೀಕಂಠಶಾಸ್ತ್ರಿಗಳು ಕನ್ನಡದಲ್ಲಿ ಕಾವ್ಯ ಹಾಗೂ ನಾಟಕಗಳನ್ನು ರಚಿಸಿದ್ದಾರೆ. ಅನಂತನಾರಾಯಣಶಾಸ್ತ್ರಿಗಳು 'ಕರ್ಣಾಟಕ ನಾಗಾನಂದ' ಕರ್ಪೂರ ಮಂಜರೀ ಪರಿಣಯ' ನಾಟಕಗಳನ್ನು ಕಾವ್ಯಭಾಷೆಯಲ್ಲಿ ರಚಿಕೊಟ್ಟಿರುವುದು ಅವರ ಹೆಗ್ಗಳಿಕೆ.

ಸೋಸಲೆ ಅಯ್ಯಾಶಾಸ್ತ್ರಿಯು ಚಾಮರಾಜರ ನಿಕಟವರ್ತಿಗಳಾಗಿದ್ದು ಪ್ರೌಢವಾದ ಕಾವ್ಯಗಳನ್ನು ರಚಿಸಿದ್ದಾರೆ. ಶೇಷರಾಮಾಯಣ ಹಾಗೂ 'ದಮಯಂತೀ ಚರಿತ್ರ'ಗಳನ್ನು ರಚಿಸುವುದರೊಡನೆ ಮಕ್ಕಳಿಗಾಗಿ ಹಲವು ಪದ್ಯಗಳನ್ನು ಸೃಜಿಸಿದ್ದಾರೆ. ಮೋಟಗಾನಹಳ್ಳಿಯ ಶಂಕರಶಾಸ್ತ್ರಿ, ರಾಮಶೇಷಶಾಸ್ತ್ರಿ, ಶಂಕರಶಾಸ್ತ್ರಿ ಡಿ.ಶಾಮರಾಯರು, ಮುಂತಾದವರು ಪರಂಪರಾಗತ ಪ್ರೌಢಕಾವ್ಯ ಹಾಗೂ ನಾಟಕಗಳನ್ನು ರಚಿಸುವ ಮೂಲಕ ಹೊಸ ಗನ್ನಡ ಕಾವ್ಯಕ್ಕೆ ನಾಂದಿ ಹಾಡಿದರು.

**೩. ಬಸವಪ್ಪಶಾಸ್ತ್ರಿ (೧೮೪೩-೧೮೯೧)**

ಅಭಿನವ ಕಾಳಿದಾಸ ಎಂದು ಪ್ರಸಿದ್ಧನಾದ ಬಸವಪ್ಪಶಾಸ್ತ್ರಿಯು ಹೊಸಗನ್ನಡದ ಅರುಣೋದಯ ಕಾಲದ ಘನವಿದ್ವಾಂಸ, ಚಾಮರಾಜೇಂದ್ರ ಒಡೆಯರ ಆಪ್ತವಲಯದಲ್ಲಿ ಗುರುತಿಸಿಕೊಂಡಿದ್ದ ಇವರು "ತನ್ನ ಹದಿನೆಂಟನೆಯ ವಯಸ್ಸಿನಲ್ಲಿಯೇ ಮುಮ್ಮಡಿ ಕೃಷ್ಣರಾಜರ ಅಭ್ಯುದಯವನ್ನು ಸಾರುವ ಸಂಸ್ಕೃತ ಚಂಪೂ ಕಾವ್ಯಗಳನ್ನು ರಚಿಸುವಷ್ಟು ಪಾಂಡಿತ್ಯ ಪ್ರತಿಭೆಗಳನ್ನು ಹೊಂದಿದ್ದನು. ಜೊತೆಗೆ ವಕ್ತೃತ್ವ, ಗಮಕ ಕಲೆಗಳಲ್ಲಿಯೂ ಪರಿಣತನಿದ್ದರಿಂದ ಅವನು ಆ ಸ್ಥಾನದಲ್ಲಿ ಎದ್ದು ಕಾಣುವಂತಾಯಿತು. ಬಸವಪ್ಪಶಾಸ್ತ್ರಿಯದು ಸಹಜ ಸ್ಫೂರ್ತಿಯ ಅಭಿಜಾತ ಕವಿತ್ವ. ಪ್ರೌಢ ಕಾವ್ಯ ರಚನೆಯಲ್ಲಿ ಹೇಗೋ ಹಾಗೆಯೇ ಲಲಿತವಾದ ಪದ್ಯರಚನೆಯಲ್ಲಿಯೂ ಸಮರ್ಥನಿದ್ದನು"[೪] 'ಬಾಲಿಕಾಗೀತ ಮುಕ್ತಾಕಲಾಪ' , 'ದಮಯಂತೀ ಸ್ವಯಂವರ', 'ಸಾವಿತ್ರೀ ಚರಿತ್ರೆ' ಮುಂತಾದವುಗಳನ್ನು ಕಾವ್ಯ ಭಾಷೆಯಲ್ಲಿಯೇ ಬರೆದಿದ್ದಾನೆ.

ಸಾವಿತ್ರೀಚರಿತ್ರೆಯನ್ನು ಷಟ್ಪದಿಯಲ್ಲಿಯೂ, ಭರ್ತೃಹರಿ ಸುಭಾಷಿತವನ್ನು ವೃತ್ತದಲ್ಲಿಯೂ, ನೀತಿಸಾರ ಸಂಗ್ರಹವನ್ನು ಕಂದಪದ್ಯದಲ್ಲಿಯೂ, 'ದಮಯಂತಿ ಸ್ವಯಂವರ' ಕೃತಿಯನ್ನು ಚಂಪೂ

ಶೈಲಿಯಲ್ಲಿಯೂ ಬರೆಯಲಾಗಿದೆ. ಶಾಕುಂತಲ, ಉತ್ತರ ರಾಮಚರಿತೆ, ಮಾಲತೀ ಮಾಧವ, ರತ್ನಾವಳೀ ವಿಕ್ರಮೋರ್ವಶೀಯ, ಶೂರಸೇನಚರಿತ್ರೆ ಮುಂತಾದ ನಾಟಕಗಳನ್ನು ಅರಮನೆಯ ರಂಗಭೂಮಿಗಾಗಿಯೇ ಬರೆದು ಅಳವಡಿಸಿರುವುದನ್ನೂ ಗಮನಿಸಿದಾಗ ಬಸವಪ್ಪ ಶಾಸ್ತ್ರಿಗಳ ಪ್ರತಿಭೆ ಅಸಾಧಾರಣವಾದುದು ಎಂದೆನಿಸುತ್ತದೆ. "ವರಕವಿ ಕಾಳಿದಾಸನ ಅಂತರಂಗವನ್ನು ಹೊಕ್ಕು ಅದರ ಆಳ-ಔನ್ನತ್ಯಗಳನ್ನು ಅರಿತು ಅದನ್ನು ಇತರರಿಗೆ ದರ್ಶನ ಮಾಡಿಸುವ ಕಾರ್ಯದಲ್ಲಿ ಕೃತಕೃತ್ಯನಾಗಿದ್ದಾನೆ ಕವಿ, ಆತನ ಅಭಿಜ್ಞಾನಶಾಕುಂತಲ' ನಾಟಕದಲ್ಲಿ, ಮೂಲದ ನಯ, ನಾಜೋಕು, ಭಾಷೆಯ ಲಾಲಿಯ, ಮಾತಿನ ಬೆಡಗೂ ಕನ್ನಡಕ್ಕೆ ಇಳಿದು ಬಂದಿದೆ. ಈ ಕಾರಣದಿಂದಲೇ ಈತನಿಗೆ 'ಅಭಿನವಕಾಳಿದಾಸನೆಂಬ ಬಿರುದು ಬಂದಿದೆ"[೫]

ಬಸವಪ್ಪ ಶಾಸ್ತ್ರಿಗಳು ಘನವಿದ್ವಾಂಸರಾಗಿದ್ದರೂ ಕೂಡ ಅವರ ಭಾಷೆಯಲ್ಲಿ ಸಂಧಿಕಾಲದ ಸಂದಿಗ್ಧತೆಗಳಿರುವುದನ್ನು ಗುರುತಿಸಬಹುದು. ಕಂದಪದ್ಯದಲ್ಲಿ ರಚನೆಯಾಗಿರುವ ಶಾಕುಂತಲ ನಾಟಕದ ಸಂಸ್ಕೃತ ಶ್ಲೋಕವೊಂದನ್ನು ಗಮನಿಸಬಹುದು.

"ಯೋಷಾಜನ ಮೊಲವಿಂದೆ ಶಿ

ರೀಷಮನತಿ ಮೃದುಲ ಕೇಸರಾಗ್ರಮನಳಿಯಂ

ದೀಪಚ್ಚುಂಬಿತಮಂ ಸವಿ

ಶೇಷದಯಂ ಕನ್ನವುರವನೆಸಗುವುದಲ್ತೇ"[೬]

ಈ ಪದ್ಯದಲ್ಲಿ ಹೊಸಗನ್ನಡ ಹೊಳಹುಗಳಿಗಿಂತ ಸಂಸ್ಕೃತ ಭೂಮಿಷತೆಯೇ ಅಧಿಕವಾಗಿದೆ. ಸಂಸ್ಕೃತದ ಪ್ರಭಾವದಿಂದ ಬಿಡುಗಡೆ ಹೊಂದುವಲ್ಲಿ ಪಡಬೇಕಾದ ಪರಿಶ್ರಮವನ್ನು ಈ ಪದ್ಯದಲ್ಲಿ ಕಾಣಬಹುದು. ಆದರೂ ಬಸವಪ್ಪ ಶಾಸ್ತ್ರಿಗಳ ಕಾವ್ಯ ಕೃಷಿಯು ಹೊಸಗನ್ನಡ ಕಾವ್ಯದ ಆರಂಭಘಟ್ಟದಲ್ಲಿ ಮಹತ್ವದ ಸ್ಥಾನ ಪಡೆದಿದೆ.

**೪. ಮುದ್ದಣ (ಕ್ರಿ.ಶ.೧೮೮೭)**

ಮುದ್ದಣವನ್ನು ಹೊಸಗನ್ನಡ ಕಾವ್ಯಾರಂಭದ ಮೊದಲ ಕೋಗಿಲೆ ಎಂದೂ, ಹೊಸಗನ್ನಡದ ಮುಂಗೋಳಿ ಎಂದೂ ಕರೆಯುತ್ತಾರೆ. ಈತನ ಕರ್ತೃತ್ವ ಶಕ್ತಿಯು ಸಾಹಿತ್ಯಾಸಕ್ತರನ್ನು ಬೆರಗುಗೊಳಿಸುವಂಥದ್ದು. ಈತನು "ಆಧುನಿಕರಲ್ಲಿ ಮೊದಲಿಗನಾಗುವುದಕ್ಕೆ ಕಾಲವೊಂದೇ ಕಾರಣವಾಗಿರದೆ ಅವನು ಪಂಪನಿಂದ ತನ್ನವರೆಗೆ ಹಬ್ಬಿದ ಪ್ರಾಚೀನ ಸಾಹಿತ್ಯವನ್ನು ಅರಗಿಸಿಕೊಂಡಿದ್ದನೆಂಬುದೇ ಆಗಿದೆ. ಅವನ ಕಾಲ ಎಲ್ಲ ದೃಷ್ಟಿಯಿಂದಲೂ ಸಂಧಿಕಾಲವಾಗಿತ್ತು."[೭] ಹಳಗನ್ನಡವನ್ನು ಬಿಟ್ಟು ಹೊಸಗನ್ನಡದಲ್ಲಾಗಲೀ ಅಥವಾ ಹೊಸತನ ಬಿಟ್ಟು ಹಳಗನ್ನಡದಲ್ಲಾಗಲಿ ಕೃತಿ ರಚಿಸುವ ಇರಾದೆ ಮುದ್ದಣಗಿಲ್ಲದೆ ತಾಕಲಾಟದಲ್ಲಿ ತೊಳಲಾಡುತ್ತಿರುವುದು ಅವನ ಕಾವ್ಯ ನಿರ್ಮಿತಿಯಲ್ಲಿಯೇ ಕಂಡು ಬರುತ್ತದೆ. "ರಾಮಾಶ್ವಮೇಧದ ಕತೆ ಹಳೆಯದೆನಿಸಿ, ಮುದ್ದಣ-ಮನೋರಮೆಯರ ಸರಸ-ಸಂವಾದಗಳು ಅತ್ಯಾಧುನಿಕವಾದಂತೆ ಕಂಗೊಳಿಸುತ್ತವೆ.

ಅಂತೇ ಈ ಕಾಯ ಸಾಮನ್ಯದ ಚಿತ್ರಕ್ಕೆ ಸುವರ್ಣದ ಚೌಕಟ್ಟು ಎಂಬ ಅನುಚಿತವಾದ ಅಭಿಪ್ರಾಯಕ್ಕೆ ಎಡೆಗೊಟ್ಟಿತು."[೮] ಈ ಅಭಿಪ್ರಾಯದಿಂದ ಹೊಸಸಾಹಿತ್ಯ ಪ್ರಕಾರದ ನಿರ್ಮಾಣದ ಹವಣಿಕೆಯನ್ನು ತೋರದಿದ್ದರೂ ಹಳಗನ್ನಡ ಸಾಹಿತ್ಯಕ್ಕೆ ವಿದಾಯ ಹೇಳಿರುವುದನ್ನಂತೂ ತೋರುತ್ತದೆ.

ಮುದ್ದಣನು 'ರಾಮಂಶ್ವಮೇಧ' ಕೃತಿಯನ್ನು ಹಳಗನ್ನಡ ಗದ್ಯಶೈಲಿಯಲ್ಲಿ ರಚಿಸಿದ್ದಾನೆ. "ತಿರುಳ್ಗನ್ನಡದೊಳ್ ಕತೆಯನುಸಿರ್ವುದಾಗಿ" ಹೇಳುವಲ್ಲಿ ಸಂಸ್ಕೃತಕ್ಕೆ ಬೆನ್ನು ತಿರುಗಿಸಿರುವುದು ಗೋಚರವಾಗುತ್ತದೆ. 'ಶ್ರೀರಾಮ ಪಟ್ಟಾಭಿಷೇಕ'ವು ವಾರ್ಧಕ ಷಟ್ಪದಿಯಲ್ಲಿ ರಚನೆಯಾಗಿದ್ದು ವಸ್ತು ಹಳಗನ್ನಡದ್ದಾದರೂ ಭಾಷೆಯು ಹೊಸಗನ್ನಡದ ಆರಂಭವನ್ನು ಸೂಚಿಸುತ್ತದೆ. ಸಮುದ್ರವನ್ನು ವರ್ಣಿಸುವ ಪದ್ಯವನ್ನು ನೋಡಬಹುದು.

"ಏನಿದಚ್ಚರಿ ಬೇಡಿದರ್ಗೆ ಕರಿತುರುಗಭೂ
ದೇನುನವರತ್ನ ಕನ್ಯಾ ಕಲ್ಪಭೂರಾಹನ
ದೀನಪಿಯೂಷವಸ್ತ್ರಾಭರಣ ಗೇಹನಿಜದೇಂಗಳಂ ಮಾಣದೆ
ದಾನಮಿತಾದುದೇನಿರ್ಪುದೆಮಗೀಯಲೆಂ
ದಾನೀರದಂಗಳಬ್ಧಿಯನಳ್ಕಿ ಬೇಡಿದೊಡೆ
ತಾನಂಜಿದನೆ ಜೀವನಂಗೊಟ್ಟನೆನೆ ಚಿತ್ರಮಲ್ತೆ ಧಾರ್ಮಿಕರ ಚರಿತಂ"[೯]

ಮುದ್ದಣನು ಈ ಕಾವ್ಯದಲ್ಲಿ ಪ್ರಯೋಗಶೀಲತೆಗೆ ಕೈ ಹಾಕಿ ಹೊಸ ಉಪಮೆಗಳು, ರೂಪಕಗಳು, ಪೂರ್ವಕಥೆಗಳನ್ನು ಅವಕಾಶ ದೊರೆತ ಕಡೆಗೆಲ್ಲ ತಂದು ಹೊಂದಿಸಿದ್ದಾನೆ.

ಅದ್ಭುತ ರಾಮಾಯಣವು ಮುದ್ದಣನ ಮೊದಲ ಕಾವ್ಯವಾಗಿದ್ದು ಕಥನಕಲೆಯ ಕುಶಲತೆಯು ಎದ್ದು ಕಾಣುತ್ತದೆ. ನೀರಸವಾದ ಪುರಾಣಾಂಶಗಳನ್ನು ಕೈಬಿಟ್ಟು ರಸವತಾಗಬಲ್ಲ ಸನ್ನಿವೇಶಗಳನ್ನು ಸ್ವಂತಿಕೆಯಿಂದ ಮುದ್ರಿಸಿದ್ದಾನೆ. "ಹೊಸ ರೀತಿಯ ಪದಗಳನ್ನು ಪ್ರಯೋಗಿಸುವ ಮುದ್ದಣನ ಶಬ್ದ ಪ್ರತಿಭೆಯಂತೂ ಅದ್ವಿತೀಯವಾದದ್ದು. ಅವನ ಕನ್ನಡೀಕರಣ ಪ್ರವೃತ್ತಿಯೂ ಗಮನ ಸೆಳೆಯುವಂಥದ್ದು. ಜಲಜವನ್ನು ನೀರ್ವೂ ಎಂದೂ, ಮಂದಮಾರುತವನ್ನು ಕಿರುವೆಲರ್ ಎಂದೂ, ಪುಷ್ಪಲತೆಗೆ ಪೂವಳ್ಳಿ ಎಂದೂ ಮಂದಸ್ಮಿತವನ್ನು ಕಿರುನಗೆ ಎಂದೂ, ಚತುರ್ಮುಖನನ್ನು ನಾಲ್ಮೊಗ ಎಂದೂ, ಕಪಿಯನ್ನು ಮಲೆನಾಡಿಗ ಎಂದೂ, ಸಪ್ತಸಾಗರವನ್ನು ಕಡಲೇಳ್ ಎಂದೂ, ವಿಮಾನವನ್ನು ಗಾಳಿದೇರ್ ಎಂದೂ ದೇವತೆಗಳನ್ನು ಸಗ್ಗಿಗರ್ ಎಂದೂ ಮುದ್ದಣ ಕನ್ನಡಿಸಿರುವ ರೀತಿ ಅವನ ವಿಚಾರದಲ್ಲಿ ನಮ್ಮ ಅಭಿಮಾನ ಉಕ್ಕೆರುವಂತೆ ಮಾಡುತ್ತದೆ."[೧೦] ಮುದ್ದಣನು ಈ ರೀತಿಯ ಹೊಸತನಗಳನ್ನು ಮೆರೆಯುವಾಗ ರೂಢಿ, ಪರಂಪರೆಗಳನ್ನು ದಿಟ್ಟತನದಿಂದ ಮುರಿಯುತ್ತಾನೆ. ಅದಕ್ಕಾಗಿಯೇ ಇವನು ಹೊಸಗನ್ನಡ ಕಾವ್ಯದ ಆರಂಭದ ತೇರನ್ನೆಳೆಯುವವರಲ್ಲಿ ಮೊದಲಿಗನಾಗಿ ಗುರುತಿಸಲ್ಪಡುತ್ತಾನೆ. ಕವಿಯ ಮನೋಭೂಮಿಕೆಯು

ಹೊಸತನದತ್ತ ತುಡಿಯುತ್ತಿರುವುದು ಆತನ ಯಕ್ಷಗಾನ ಕೃತಿಗಳಾದ 'ರತ್ನವತೀ ಕಲ್ಯಾಣ' ಹಾಗೂ 'ಕುಮಾರವಿಜಯ'ಗಳಲ್ಲಿಯೂ ಕಂಡು ಬರುತ್ತದೆ. ಹೀಗೆ ಮುದ್ದಣ ಕಾವ್ಯನಾಮದ ನಂದಳಿಕೆ ಲಕ್ಷ್ಮೀನಾರಾಣಪ್ಪನು ಕನ್ನಡ ಸಾಹಿತ್ಯ ಕ್ಷೇತ್ರವು ಹೊಸದಿಗಂತದತ್ತ ಚಲಿಸಲು ಹೆದ್ದಾರಿಯ ನಿರ್ಮಾಣಕ್ಕೆ ತಳಹದಿ ಒದಗಿಸಿದ್ದಾನೆ.



**೫. ನರಹರಿ ಜಯರಾಯಾಚಾರ್ಯ (೧೯೦೫)**

ಮೈಸೂರಿನ ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿ ಉಪಾಧ್ಯಾಯ ವೃತ್ತಿಯಲ್ಲಿದ್ದ ಜಯರಾಯಾ ಚಾರ್ಯರು ಮೈಸೂರು ಅರಮನೆಯೊಡನೆ ನಿಕಟ ಸಂಪರ್ಕವನ್ನಿರಿಸಿಕೊಂಡಿದ್ದರು. ರಾಣಿ ಚಲವಾಜಮ್ಮಣಿಯ 'ವರನಂದೀ ಕಲ್ಯಾಣ' ಎಂಬ ಸಾಂಗತ್ಯವನ್ನು ಅಳಿಯ ಲಿಂಗರಾಜನ 'ನರಪತಿಚರಿತ'ವನ್ನೂ ಪರಿಶೋಧಿಸಿ ಪ್ರಕಟಿಸಿದ್ದಾರೆ. 'ಕರ್ಣಾಟ ಭಾಷಾಕರಂ' ಎಂಬ ಹಳಗನ್ನಡ ಹಾಗೂ ದೇಶ್ಯ ಶಬ್ದಗಳನ್ನೊಳಗೊಂಡ ನಿಘಂಟು ಶಾಸ್ತ್ರವನ್ನು ರಚಿಸಿದ್ದಾರೆ. ಚಂಡಕೌಶಿಕ ನಾಟಕ, ಮದಾಲಸಾಪರಿಣಯ, ವೇಣೀ ಸಂಹಾರ ನಾಟಕ, ರಾಮವರ್ಮ ಲೀಲಾವತಿ, ಮಹಾಬಧಿರಪ್ರಹಸನ, ಸಿರಿಯಾಳರಾಜ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಸ್ವತಃ ಹರಿಕಥೆಯನ್ನು ಮಾಡುತಿದ್ದ ಆಚಾರ್ಯರು ಅದಕ್ಕಾಗಿ ಹಲವಾರು ಉಪಾಖ್ಯಾನಗಳನ್ನು ಬರೆದಿದ್ದಾರೆ. ಸಂಗೀತ ಪ್ರಿಯರಾಗಿದ್ದ ಅವರಿಂದ ಸಂಗೀತ ಕೃತಿಗಳೂ ರೂಪುಗೊಂಡಿವೆ. ಅವರ 'ಅನುಕರಣ ಕೀತಲಹರಿ' ಎಂಬ ಕೃತಿಯು ಹೊಸಗನ್ನಡ ಕಾವ್ಯ ಸಂದರ್ಭದಲ್ಲಿ ಕೆಲವು ವೈಶಿಷ್ಟ್ಯಗಳನ್ನು ತೋರಿಸುವ ಕವನ ಸಂಕಲನ. ಎಳೆಯರಿಗಾಗಿ ಬರೆದ ಕವನಗಳಿಗೆ ಆರಿಸಿಕೊಂಡಿರುವ ವಸ್ತುವೂ ಕೂಡ ಹೊಸತನದ್ದಾಗಿದೆ. ತಾರಕ್ಕ ಬಿಂದಿಗೆ, ನೀರಿಗೆ ಹೋಗೋಣ, ಗಡಿಯಾರದ ಹಾಡು, ಪಾಠಶಾಲೆಗೆ ಹೋಗುವುದು, ಪಠ ಆಡಿಸುವುದು, ಮುಂತಾದ ಪದ್ಯಗಳು ಕಾಲಕ್ಕೆ ತಕ್ಕ ಹೊಸತನವನ್ನು ತುಂಬಿಕೊಂಡಿವೆ. ಇಲ್ಲಿನ ಲಲಿತಪದ್ಯಗಳು ತಾಯಿ, ಶಾಲೆ, ಗಡಿಯಾರ, ಬೆಕ್ಕು ನವಿಲು ಮುಂತಾದ ವಿಷಯಗಳನ್ನು ಒಳಗೊಂಡಿವೆ. ಬೆಕ್ಕನ್ನು ಕುರಿತು ರಚಿತವಾಗಿರುವ ಪದ್ಯವನ್ನು ನೋಡಬಹುದು.

"ಎಲೆಲೆ ಬೆಕ್ಕೆ ರೂಪಿನಿಂದಲಿ

ಹುಲಿಜಾತಿಗೆ ಸೇರ್ದೆನೆಂದು ಗರ್ವಿಸಬೇಡ

ಒಲುಮೆಯು ನಿನ್ನ ಲಿಹುದೇಂ

ಇಲಿಗಳ ಹಿಡಿಯುವುದರೊಳಾಯ್ತು ನಿನ್ನಯ ಶೌರ್ಯಂ"[೧೧]

ಹೀಗೀ ನವಿಲನ್ನು ಕುರಿತು

'ನವಿಲೇ ನವಿಲೇ ನಲಿದಾಡು ನವಿಲೇ'

ಎಂದು ಅನುಕರಣ ಗೀತ ಲಹರಿಯನ್ನು ರಚಿಸಲು ನಾಂದಿ ಹಾಡಿದ್ದಾರೆ. ಇವರು ಭಾಷೆ, ವಸ್ತು, ಶೈಲಿಯಲ್ಲಿ ಹೊಸತನವನ್ನು ಕಂಡುಕೊಳ್ಳುವ ಮೂಲಕ ಹೊಸಗನ್ನಡ ಕಾವ್ಯಕ್ಕೆ ತಮ್ಮ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ.

**೬. ಚುರುಮುರಿ ಶೇಷಗಿರಿರಾಯರು (ಕ್ರಿ.ಶ.೧೮೬೯)**

ಕನ್ನಡ ನವೋದಯ ಪೂರ್ವ, ಸಾಹಿತ್ಯದ ಸಂದರ್ಭದಲ್ಲಿ ಹೆಸರಿಸಲೇಬೇಕಾದ ಕವಿ ಚುರುಮುರಿ ಶೇಷಗಿರಿರಾಯರು ಸಂಸ್ಕೃತದ ಪಾರುಪತ್ಯವೇ ವಿವೃಂಭಿಸುತ್ತಿದ್ದ ಕಾಲದಲ್ಲಿ ಕನ್ನಡ ಕಾವ್ಯವನ್ನು ಸರಳ ಹಾಗೂ ಸುಲಭವಾಗಿ ಕಟ್ಟಿಕೊಟ್ಟವರಲ್ಲಿ ಇವರೂ ಒಬ್ಬರು. ಉತ್ತರ ಕರ್ನಾಟಕದ ಜನರು ಪರಭಾಷಾ ವವ್ಯಾಮೋಹದಲ್ಲಿ ಮುಳುಗಿದ್ದ ವಿಕೃತ ಸನ್ನಿವೇಶದಲ್ಲಿ ತಾಯಿನುಡಿ ಕನ್ನಡದ ಬಗ್ಗೆ ಯೋಚಿಸುತ್ತಾ "ಮಾತೃಭಾಷೆಯಾದ ಕನ್ನಡದ ಸ್ವರೂಪ-ಸತ್ವನ್ನು ಅರಿಯದ ಮೇಲೆ ಕನ್ನಡಿಗನಾಗಿ ಪ್ರಯೋಜನವೇನು? ನಮಗೇ ನಮ್ಮ ಭಾಷೆಯ ಮೇಲೆ ಅಭಿಮಾನವಿಲ್ಲದೆ ಹೋದರೆ ನಮ್ಮ ಕನ್ನಡ ಹೇಗೆ ಮುಂದೆ ಬಂದೀತು? ಕನ್ನಡದಲ್ಲಿ ಒಳ್ಳೆಯ ಪುಸ್ತಕಗಳು ಹೇಗೆ ಬಂದಾವು? ನಮ್ಮ ಕನ್ನಡವು ಮುನ್ನಡೆಯದೆ ಇದ್ದರೆ ನಾವು ಇಲ್ಲಿ ಹುಟ್ಟಿ ಬಂದೂ ಸಾರ್ಥಕವೇನು?"[೨] ಎಂದು ತಮ್ಮನ್ನು ತಾವು ತರ್ಕಕ್ಕೆ ಒಳಗು ಮಾಡಿಕೊಂಡರಂತೆ.

ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕವನ್ನು ಪ್ರಥಮಬಾರಿಗೆ ಕನ್ನಡಕ್ಕೆ ಅನುವಾದಿಸಿಕೊಟ್ಟ ಹೆಗ್ಗಳಿಕೆ ಶೇಷಗಿರಿರಾಯರದು. ನಾಟಕದಲ್ಲಿ ಬಳಸಿರುವ ಕನ್ನಡದ ಭಾಷೆ ಹೊಸತು, ದೇಸೀಯ ನುಡಿಗಟ್ಟುಗಳ ಅಗತ್ಯ ಬಳಕೆ ಸೂಕ್ತ ಸನ್ನಿವೇಶಗಳಿಗೆ ಸೂಕ್ತ ಉಪಮೆಗಳನ್ನು ಬಳಸಿಕೊಂಡು ನಾಟಕವನ್ನು ಭಾಷಾಂತರಗೊಳಿಸಿದ್ದರೂ ಹಳೆಯ ಹಾಗೂ ಹೊಸಗನ್ನಡ ಸಂಧಿಕಾಲದ ಭಾಷಾ ಸಂದಿಗ್ಧತೆಗಳಿಲ್ಲದಿಲ್ಲ. ಆದರೆ ಕನ್ನಡಕ್ಕೊಂದು ಹೊಸ ಉಡುಗೆಯನ್ನು ತೊಡಿಸುವಲ್ಲಿ ಶೇಷಗಿರಿರಾಯರು ಶ್ರಮಿಸಿದ್ದಾರೆ.

ಸ್ವತಃ ಕವಿಯಾಗಿದ್ದ ಶೇಷಗಿರಿರಾಯರ ಸೃಜನಶೀಲತೆಯು ಅವರು ರಚಿಸಿರುವ 'ಸುಂದರ ನಾಟಕ' ಎಂಬ ಸಂಗೀತ ನಾಟಕದಲ್ಲಿ ಪ್ರಖರವಾಗಿ ಫಲಿತಗೊಂಡಿದೆ. ಇಡೀ ನಾಟಕ ಕಾವ್ಯಮಯವಾಗಿದ್ದು ಸಮೃದ್ಧ ಹಾಡುಗಳಿಂದ ತುಂಬಿದೆ. ಒಂದು ಸನ್ನಿವೇಶದ ಒಂದು ಹಾಡನ್ನು ಇಲ್ಲಿ ಉದಾಹರಿಸಬಹುದು.

"ಇನ್ನೇನು ಗತಿಯೆ ಬಾಲೆ! ಗಾಯನ ಲೋಲೆ?! ||ಪ||

ಕನ್ಯೆ ಗರತಿಯರು ಹೊನ್ನ ಬೇಡದಲೆ ಪ್ರ

ಸನ್ನರಾಗುತೆ ವಿಟರನ್ನು ಮೋಹಿಸಿದ ಮ್ಯಾಲಿನ್ನೇನು? ||೧||

ಸಖಿ ಬಾ...... ಬಾ.. ..... ಮಾರನ ರಿಕಿಬೆರಳರಗಿಳಿಯೇ ಮದನಮೋಹನರಳೇ

ಸಾಕಮ್ಮ, ಶಹರದ ಸೊಗಸು ಶೃಂಗಾರ

ಬೇಕಮ್ಮಾ, ನಮಗೂ ಹಳ್ಳ್ಯೋರ ವಿಚಾರ||೨||

ಮೇಘಾವಳಿಯನ್ನಾಗಸದೊಳು ಕಂ|

ಡಾಗೇ ನದಿಲ್ ನಲಿ ನಲಿದು ಕೂಗುವುದು"[೧೩]

ಇಲ್ಲಿರುವ ಭಾಷೆಯ ಸೊಬಗು, ಲಾಲಿತ, ಸರಳತೆ, ದೇಸೀಯತೆಗಳು ಶೇಷಗಿರಿರಾಯರ ಕರ್ತೃತ್ವ ಶಕ್ತಿಯ ಎತ್ತರ-ಬಿತ್ತರಗಳನ್ನು ಸಮಕಾಲೀನ ಸಾಮಾಜಿಕ ಸನ್ನಿವೇಶಗಳನ್ನು ಬಿಂಬಿಸುವಲ್ಲಿ ಯಶಸ್ವಿಯಾಗಿವೆ. ಹೊಸಗನ್ನಡ ಕಾವ್ಯದ ಸಂದರ್ಭದಲ್ಲಿ ಮೊದಲ ಘಟ್ಟವು ನಿಧಾನವಾಗಿ ಒಂದೊಂದೇ ಅಡಿಗಲ್ಲನ್ನಿಡುವುದರ ಮೂಲಕ ನಿರ್ಮಾಣವಾಗಿದೆ. ಗೋಡೆ ನಿರ್ಮಾಣ ಕಾರ್ಯದಲ್ಲಿ ಪ್ರತಿ ಇಟ್ಟಿಗೆಯು ಅಗತ್ಯವಾಗಿರುವಂತೆ ಹೊಸಗನ್ನಡ ಕಾವ್ಯದ ತಳಹದಿಗೆ ಪ್ರತಿಯೊಬ್ಬ ಆರಂಭಕಾಲದ ಕವಿಯ ಕೊಡುಗೆಯು ಅತ್ಯಮೂಲ್ಯವಾದುದು.

**೭. ಇ.ಪಿ.ರೈಸ್ (೧೮೪೯-೧೯೭೬)**

ಎಡ್ವರ್ಡ್ ಪೀಟರ್ ರೈಸ್ ಇವರು ೧೮೭೪ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಇವರು ತಂದೆಯೊಡನೆ ಬೆಂಗಳೂರು ಹಾಗೂ ಕೋಲಾರ ಭಾಗಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸಂಚರಿಸುತ್ತ ಕ್ರೈಸ್ತಧರ್ಮ ಪ್ರಚಾರ ಕೈಗೊಂಡಿದ್ದರ ಪರಿಣಾಮವಾಗಿ ಕನ್ನಡ ಭಾಷೆಯ ಜೊತೆಗೆ ಸಾಹಿತ್ಯ ಹಾಗೂ ಸಂಸ್ಕೃತಿಗಳ ಪರಿಚಯವೂ ಆಯಿತು. ಬೈಬಲ್‌ನ ಒಡಂಬಡಿಕೆಗಳನ್ನು ಹಂತ ಹಂತವಾಗಿ ಕನ್ನಡಕ್ಕೆ ತಂದು ಪ್ರಕಟಿಸಿದರು. 'ಕನ್ನಡ ಬೈಬಲ್ ಕೀರ್ತನೆಗಳು' ಎಂಬ ತಲೆಬರಹದಡಿಯಲ್ಲಿ ಕ್ರೈಸ್ತಗೀತೆಗಳನ್ನೂ ಸಂಕಲಿಸಲಾಯಿತು. ಇವರು ಕನ್ನಡದಲ್ಲಿ ಬರೆದ ಎರಡು ಹಾಡುಗಳನ್ನು 'ಕನ್ನಡ ಸಂಗೀತ ಸಂಗ್ರಹ' ಎಂಬ ಕೃತಿಯಲ್ಲಿ ಪ್ರಕಟಿಸಲಾಗಿದೆ.

ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಇವರು ರಚಿಸಿದ 'ಹಿಸ್ಟರಿ ಆಫ್ ಕೆನರೀಸ್ ಲಿಟರೇಚರ್' ಎಂಬ ಕೃತಿಯು ಗಮನಾರ್ಹವಾಗಿದ್ದು ಕನ್ನಡದ ಸಾಹಿತ್ಯ ಚರಿತ್ರೆಯನ್ನೊಳಗೊಂಡ ಮೊಟ್ಟಮೊದಲನೆಯದೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಂಗ್ಲಿಷ್ ಭಾಷೆಯಲ್ಲಿಯೇ ಇವರ ಕೆಲವು ಕೃತಿಗಳು ರಚನೆಯಾಗಿದ್ದರೂ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಪ್ರಮುಖ ದಾಖಲೆಗಳೆನಿಸುತ್ತವೆ. ಇವರು ಕನ್ನಡವನ್ನು ಸುಲಲಿತವಾಗಿ ಬಳಸುತ್ತಿದ್ದರೆಂಬುದಕ್ಕೆ ಯೇಸುಕ್ರಿಸ್ತನನ್ನೂ ಕುರಿತು ರಚನೆಯಾಗಿರುವ ಹಾಡೊಂದನ್ನು ನೋಡಬಹುದು.

"ಜಯಜಯ ವಿಜಯ ಸ್ವಾಮಿಗೆ

ಜಯಜಯ ವಿಜಯ ಕ್ರಿಸ್ತಗೆ

ಜಯಜಯ ವಿಜಯ ಸ್ವಾಮಿಗೆ

ಜಯಶಾಲಿ ಯೇಸು ಸ್ವಾಮಿಯೇ

೧. ಪಾಪಾತ್ಮರು ಆತನ್ನ ತಾತ್ಸಾರಗೈದರು:

ಈಗ ಸ್ವರ್ಗ ಪತಿಯಾದನು

೨. ಕಿರೀಟ ಮುಳ್ಳಿನಿಂದ ಹೆಣೆದು ಕೊಟ್ಟರು

ಮಹಿಮಾ ಕಿರೀಟವಾಯಿತು

೩. ಪಾಪಿಷ್ಠ ಮಿತ್ರನೆಂದು ನಕ್ಕರು:

ಆ ನಾಮ ಮಾನ ಹೊಂದಿತು

೪. ವಿರೋಧಿಗಳಿಗಾಗಿ ಸ್ವಪ್ರಾಣ ಕೊಟ್ಟನು

ಕರುಣಾ ಸಮುದ್ರನಾದನು......"[೧೪]

ರೈತರು ಮೇಲಿನ ಕ್ರೈಸ್ತಗೀತೆಯಲ್ಲಿ ಬಳಸಿರುವ ಭಾಷೆ ತೀರಾ ಹೊಸದೆನಿಸುತ್ತದೆ. ಕನ್ನಡ, ನಾಡು, ನುಡಿಗಳ ವಿಷಯದಲ್ಲಿ ಅಪಾರವಾದ ಪ್ರೀತಿಯನ್ನು ಹೊಂದಿದ್ದರೆಂಬುದಕ್ಕೆ ಅವರ ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯೇ ಸಾಕ್ಷಿ. ಹೊಸಗನ್ನಡ ಕಾವ್ಯದ ಮೊದಲು ಹೆಜ್ಜೆಗಳನ್ನು ಗುರುತಿಸುವಾಗ ರೈಸ್ ಅವರ ಸಾಧನೆಯನ್ನು ಪರಿಗಣಿಸಬೇಕಾದದ್ದು ಸಂಶೋಧಕನ ಆದ್ಯಕರ್ತವ್ಯ.

**೮. ಎಸ್.ಜಿ.ನರಸಿಂಹಾಚಾರ್ಯ (೧೮೬೨-೧೯೧೧)**

ಎಸ್.ಜಿ.ನರಸಿಂಹಾಚಾರ್ಯರು ಹೊಸಗನ್ನಡದ ಅರುಣೋದಯ ಕಾಲದ ಕಣ್ಮಣಿಗಳಲ್ಲಿ ಒಬ್ಬರು. ಮೈಸೂರು ರಾಜ್ಯದ ಶಿಕ್ಷಣ ಇಲಾಖೆಯಲ್ಲಿ ಭಾಷಾಂತರಕಾರರಾಗಿ ಕೆಲಸ ಮಾಡುತ್ತಿದ್ದರು. ಇವರು "ಕರ್ಣಾಟಕ ಕಾವ್ಯಮಂಜರಿ" ಎಂಬ ಮಾಸಿಕ ಪತ್ರಿಕೆಯ ಸಂಪಾದಕರಾಗಿದ್ದು ಕನ್ನಡದ ಹಲವು ಶ್ರೇಷ್ಠ ಗ್ರಂಥಗಳನ್ನು ಪ್ರಕಟಿಸಿದರು. 'ಅಜನೃಪಚರಿತೆ', 'ದಿಲೀಪ ಚರಿತೆ'ಗಳನ್ನು ಕಾಳಿದಾಸನ ರಘುವಂಶದಿಂದ ಆಯ್ದು ಷಟ್ಪದೀ ರೂಪದಲ್ಲಿ ರಚಿಸಿದರು. ಹಲವು ಇಂಗ್ಲಿಷ್ ಭಾವಗೀತೆಗಳನ್ನು ಕನ್ನಡಕ್ಕೆ ರೂಪಾಂತರಿಸಿಕೊಟ್ಟ ಮೊದಲಿಗರಲ್ಲಿ ನರಸಿಂಹಾಚಾರ್ಯರೂ ಒಬ್ಬರಾಗಿದ್ದಾರೆ.

"Twinkle! Twinkle Little star

How I wonder what you are

ಎಂಬ ಆಂಗ್ಲ ಪದ್ಯವನ್ನು ಅನುವಾದಿಸಿದ್ದಾರೆ.

ಮಿರುಮಿರುಗುವೆ, ಹಾ ಕಿರುತಾರಗೆಯೆ ಅರಿಯೆನು

ನಾನೆಲೆ ನೀನಾರೋ|

ಧರೆಗಿಳಿಯದೆ ನೀನಿರುತಿಹೆ ದೂರದಿ ನೆರೆ ಹೊಳೆಯುವೆ

ವಜ್ರದ ತೆರದಿ||"[೧೫]

ಇಲ್ಲಿ ಕವಿಯು ನಾದಮಾಧುರ್ಯಕ್ಕೆ ಪ್ರಾಶಸ್ತ್ಯ ನೀಡುವುದಕ್ಕಾಗಿ ಮುಕ್ತ ಛಂದಸ್ಸಿನ ಮೊರೆಹೋಗಿದ್ದಾನೆ. ಕನ್ನಡ ನೆಲದ ಜಾಯಮಾನಕ್ಕೆ ಅನುಗುಣವಾಗಿ ಅನುವಾದ ಮಾಡುವುದು ಅದರ ದೈತ್ಯ ಕೃತ್ರಿದು ಪ್ರತಿಭೆಯನ್ನು ತೋರುತ್ತದೆ.

ಎಸ್.ಜಿ.ನರಸಿಂಹಾಚಾರ್ಯರು ದೇಸೀಯ ನುಡಿಗಟ್ಟಿನ ಸದ್ಬಳಕೆಯೊಡನೆ ಸ್ವೋಪಜ್ಞಶೈಲಿಯ ಸ್ವಂತ ಕಾವ್ಯಗಳನ್ನು ರಚಿಸಿದ್ದಾರೆ. 'ಗೋವಿನ ಬಾಳು' ಎಂಬ ಕವಿತೆಯನ್ನು ಕಾಣಬಹುದಾಗಿದೆ.

"ಇಟ್ಟರೆ ಸಗಣೆಯಾದೆ ತಟ್ಟಿದರೆ ಕುರುಳಾದೆ

ಸುಟ್ಟರೆ ನೊಸಲ ವಿಭೂತಿಯಾದೆ ನೀನಾರಿಗಾದೆಯೋ ಎಲೆ ಮಾನವ?"[೧೬]

ಮೇಲಿನ ಹಾಡು ಲಯಮಾಧುರ್ಯತೆಯಿಂದ ಕೂಡಿರುವ ಸರಳ ಸುಂದರ, ಸೊಬಗು ಸುಲಲಿತ ಶೈಲಿಯ ಭಾವಗೀತೆಯಾಗಿದೆ. ಅವರ ಸೃಜನಶೀಲತೆಯ ಶಕ್ತಿಯು ಘನವಾದುದು. ಕಾವ್ಯಕ್ಕೆ ಆಯ್ದುಕೊಳ್ಳುತ್ತಿದ್ದ ವಸ್ತು, ಬಳಸುತ್ತಿದ ಭಾಷೆ, ಅಭಿವ್ಯಕ್ತಿಯ ಶೈಲಿ ಇವೆಲ್ಲವುಗಳ ಅಪೂರ್ವ ಸಂಗಮವನ್ನು ಅವರ ಕಾವ್ಯಗಳಲ್ಲಿ ಗುರುತಿಸಬಹುದು.

"ಮಳೆಗಾಲದೊಳು ಬೀಜಗಳು ಮೊಳಕೆಯಾಗುವುವು

ಬೆಳೆಯುವುವು ಹುಲ್ಲುಗಳು ಸಸಿಗಳೆಲ್ಲಾ

ಇಳೆಯ ಗಿಡಮರ ಬಳ್ಳಿಗಳು ಚಿಗುರಿ ಹೂವಾಗಿ

ಫಲಿಸುವುವು ಕೆರೆಕಟ್ಟೆ ತುಂಬುತಿಹುವು"[೧೭]

ಇದು ಅವರ ಸೃಜನಶೀಲತೆಯ ವಿನೂತನ ಹಾಗೂ ಹೊಸತನದ ಸ್ವೋಪಜ್ಞತೆಯನ್ನು ಓದುಗನಿಗೆ ದರ್ಶನ ಮಾಡಿಸುತ್ತದೆ. ಅವರ ಭಾಷೆ, ಶೈಲಿ, ತಂತ್ರ, ವಸ್ತುಗಳನ್ನು ಗಮನಿಸಿದರೆ ಹೊಸಗನ್ನಡ ಕಾವ್ಯಕ್ಕೆ ತುಡಿಯುತ್ತಲೇ, ಹೊಸತನದಿಂದ ಮಿಡಿಯ ತೊಡಗಿದವರಲ್ಲಿ ಮೊದಲಿಗರಾಗಿ ಕಾಣಿಸುತ್ತಾರೆ.

ಇವರ ಒಟ್ಟಂದದ ಕನ್ನಡಸೇವೆಯು ಅಮೂಲ್ಯವಾಗಿದ್ದು ಅದನ್ನು ದೊಡ್ಡರಂಗೇಗೌಡರು "ಸ್ವಂತಿಕೆಗಾಗಿ ಶ್ರಮಿಸುವ ಮನೋಧರ್ಮ, ಪಾಂಡಿತ್ಯವನ್ನು ಎಚ್ಚರಿಕೆಯಿಂದ ಬಳಸಬೇಕೆಂಬ ಸಂಕಲ್ಪ, ಯಾವತ್ತೂ ರಸೈಕ ದೃಷ್ಟಿಯನ್ನು ಕಡೆಗಣಿಸದ ವೈಚಾರಿಕತೆ, ಕನ್ನಡಕ್ಕೆ ಏನನ್ನಾದರೂ ಹೊಸತನ್ನು ಕೊಡಲೇಬೇಕೆಂಬ ಉತ್ಕಟತೆ, ಆಂಗ್ಲಭಾಷೆಯಲ್ಲಿನ ಒಳಿತನ್ನು ಕನ್ನಡಕ್ಕೆ ಶ್ರದ್ಧೆಯಿಂದ ಹಾಯಿಸಿ ನಮ್ಮ ಕಾವ್ಯವನ್ನು ಸಂಪದ್ಭರಿತವಾಗಿ ಮಾಡಬೇಕೆಂಬ ಅಭೀಪ್ಸೆ ಈ ಎಲ್ಲದರ ಸಂಗಮವೇ

ಎಸ್.ಜಿ.ನರಸಿಂಹಾಚಾರ್ಯರ ಬದುಕು ಬರಹ"[೧೮] ಎಂಬ ಮೌಲಿಕ ಮಾತುಗಳಲ್ಲಿ ಹಿಡಿದಿಟ್ಟಿರುವುದು ಅರ್ಥಪೂರ್ಣವಾಗಿದೆ. ಈ ಮಾತುಗಳಿಂದಲೇ ನರಸಿಂಹಾಚಾರ್ಯರು ಕನ್ನಡ ಸೇವೆಗಾಗಿ ಮಿಡಿಯುತ್ತಿದ್ದುನ್ನು ಅರಿಯಬಹುದಾಗಿದೆ. ಪ್ರಬುದ್ಧ ಭಾಷಾಂತರಕಾರರಾಗಿ, ಶ್ರೇಷ್ಠ ಸೃಜನಶೀಲಬರಹಗಾರರಾಗಿ, ಪತ್ರಿಕಾ ಸಂಪಾದಕರಾಗಿ 'ಕರ್ನಾಟಕ ಕವಿಚರಿತೆ' ರೂಪಿಸುವಾಗ ಆರ್ ನರಸಿಂಹಾಚಾರ್ಯರಿಗೆ ಸಹಾಯಕರಾಗಿ, ಎಲ್ಲಕ್ಕಿಂತ ಹೆಚ್ಚಾಗಿ ಹೊಸಗನ್ನಡ ಕಾವ್ಯದ ಅರುಣೋದಯ ದಿಗಂತದ ನಿರ್ಮಾಪರಾಗಿ ಕನ್ನಡದ ಸೇವೆಗೈದಿರುವುದು ಎಸ್.ಜಿ.ನರಸಿಂಹಾಚಾರ್ಯರ ಹಿರಿಮೆ.

**೯. ಶಾಂತಕವಿ (೧೮೫೬-೧೯೨೦)**

'ಶಾಂತಕವಿ' ಎಂದು ನಾಮಾಂಕಿತರಾಗಿರುವ ಬಾಳಾಚಾರ್ಯ ಸಕ್ಕರಿಯವರದು ಉಜ್ವಲ ಪ್ರತಿಭೆಯಾಗಿದ್ದು ಅಂದಿನ ಕಾಲದ ಅಗ್ರಗಣ್ಯ ಬರಹಗಾರರೆನಿಸಿದ್ದರು. ಸುಸಂಸ್ಕೃತ ಕೌಟುಂಬಿಕ ವಾತಾರವಣದಲ್ಲಿದ್ದು ಬಾಲ್ಯದಲ್ಲಿಯೇ ಸಂಸ್ಕೃತ ಕಾವ್ಯ ಹಾಗೂ ನಾಟಕಗಳನ್ನು ಅಧ್ಯಯನ ಮಾಡಿದ್ದರು. ಜನಪದ ಹಾಡುಗಳು, ಕೀರ್ತನೆಗಳು, ಲಾವಣಿಗಳು ಅವರ ಮೇಲೆ ದಟ್ಟವಾದ ಪ್ರಭಾವ ಬೀರಿರುವುದು ಕಂಡು ಬರುತ್ತದೆ. ಇವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಡಿಯಿಟ್ಟದ್ದು 'ಮುಕುಂದ ದಾನಾಮೃತ' ಎಂಬ ಕೀರ್ತನೆಯ ಮೂಲಕ. ಕೀರ್ತನೆಗಳ ಮೂಲಕವೇ ಶಾಂತಕವಿಗಳು ಕನ್ನಡಿಗರ ಚಿತ್ತವನ್ನು ಜಾಗೃತಗೊಳಿಸಿ ಉದಯೋನ್ಮುಖ ಬರಹಗಾರರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು. ಲಾವಣಿ ಹಾಗೂ ದುಂದುಮೆಗಳು ಇವರ ಸಾಹಿತ್ಯದ ವೈಶಿಷ್ಟ್ಯಾರಚನೆಗಳು.

ಉತ್ತರ ಕರ್ನಾಟಕ ಭಾಗದಲ್ಲಿ ಮರಾಠಿ ಭಾಷೆಯು ವಿಜೃಂಭಿಸುತ್ತಿದ್ದಾಗ ಕನ್ನಡವನ್ನು ಕಟ್ಟುವ ಕಾಯಕದಲ್ಲಿ ತೊಡಗಿದ ಮೊದಲಿಗರಲ್ಲಿ ಶಾಂತಕವಿಗಳೂ ಒಬ್ಬರು. ಮರಾಠಿ ನಾಟಕಗಳ ಆರ್ಭಟಕ್ಕೆ ಕನ್ನಡ ನಾಟಕೋದ್ಯಮವು ತತ್ತರಿಸಿ ಹೋಗಿದ್ದ ಸಂದರ್ಭದಲ್ಲಿ ಕನ್ನಡ ನಾಟಕಗಳು ವೇದಿಕೆಯ ಮೇಲೆ ಪ್ರದರ್ಶನಗೊಳ್ಳಲು ಕಾರ್ಯತಂತ್ರರೂಪಿಸಿದ ಅವರು ನಾಟಕಗಳ ಮೂಲವನ್ನು ಹುಡುಕಿದ್ದು ಹೀಗೆ,

"ಎಲ್ಲಿ ನೋಡಲು ಕನ್ನಡದ ಭಾಷೆ ಮೆಟ್ಟಿಯದ
ರಲ್ಲಿಲ್ಲ, ಮೃದುಶಬ್ದವಿಲ್ಲ, ಭಾಷಾಸರಣಿ
ಯಿಲ್ಲವೈ, ಸ್ವಾರಸ್ಯವಿಲ್ಲ. ನಾಟಕವಿಲ್ಲ, ನಟನಟಿಗಳಿಲ್ಲವಿನ್ನು
ಇಲ್ಲವವು ಮುಂದಾಗುವಾಶೆ ಕೂಡಾ ಇಲ್ಲಿ
ಇಲ್ಲವೆಂದೇ ಧಾರವಾಡದ ಸೀಮೆಯ ಜನಂ
ಸೊಲ್ಲಿಸುವ ಕಾಲದಲ್ಲಿ ಕರ್ನಾಟಕ ನಾಟಕ ಪುಟಿದುದು
ಕೃತುಪುರದೊಳು"[೧೯]

ಇಲ್ಲಿ ಕೃತುಪುರ ಎಂದರೆ ಈಗಿನ ಗದಗ, ಕನ್ನಡ ನಾಡಿನಲ್ಲಿ ನಾಟಕೋದ್ಯಮಕ್ಕೆ ಅಸ್ತಿಭಾರ ಹಾಕಿದ ನೆಲೆ. ಕನ್ನಡಿಗರಿಗಾಗಿ, ಕನ್ನಡ ಭಾಷೆಯ ಉದ್ಧಾರಕ್ಕಾಗಿ ಶಾಂತ ಕವಿಗಳ ಮುಂದೆ ಇದ್ದ ಆಯ್ಕೆ ನಾಟಕ ಕಂಪನಿಯ ಸ್ಥಾಪನೆ, ಕಂಪನಿಗಳ ನಾಟಕ ಪ್ರದರ್ಶನಕ್ಕೆ ಬೇಕಾದ ಸಮರ್ಪಕ ನಾಟಕಗಳ ರಚನೆಯೇ ಆಗಿತ್ತು. ಕಾವ್ಯ ಭಾಷೆಯಲ್ಲಿ ನಾಟಕ ಬರೆಯುತ್ತಿದ್ದ ಇವರು ತಾವೇ ನಿರ್ದೇಶಿಸುತ್ತಿದ್ದರು. ಅದಕ್ಕಾಗಿಯೇ 'ಕರ್ನಾಟಕ ನಾಟಕ ಪ್ರಥಮಗುರು' ಎಂಬ ಹಿರಿಮೆಯನ್ನು ಸಂಪಾದಿಸಿದರು.

ಸಂಸ್ಕೃತದ ಕಾವ್ಯಗುಣಗಳನ್ನು ಮೆಚ್ಚಿಕೊಂಡಿದ್ದ ಶಾಂತಕವಿಗಳಿಗೆ ಕನ್ನಡಾಭಿಮಾನವೇ ಪ್ರೇರಕ ಶಕ್ತಿಯಾಗಿತ್ತು. ಕನ್ನಡಿಗರು ತಮ್ಮ ಭಾಷೆ, ಸಂಸ್ಕೃತಿಯನ್ನೆ ಮರೆಯುವಷ್ಟರ ಮಟ್ಟಿಗೆ ಆಂಗ್ಲರ ಶಿಕ್ಷಣ, ಭಾಷೆ ಆಡಳಿತಗಳು ಪ್ರಭಾವ ಬೀರಿದ್ದ ಸಂದರ್ಭದಲ್ಲಿ ಗಂಭೀರವಾಗಿ ಚಿಂತಿಸಿದ ಶಾಂತಕವಿಗಳು ಕನ್ನಡ ನಾಡು, ನುಡಿ, ಸಂಸ್ಕೃತಿಯ ಪುನರುತ್ಥಾನಕ್ಕಾಗಿ ಹಗಲಿರುಳು ಶ್ರಮಿಸಿದರು. ಅವರು ರಚಿಸಿದ 'ರಕ್ಷಿಸು ಕರ್ನಾಟಕ ದೇವಿ' ಎಂಬ ಹಾಡು ಮುಂಬೈ ಕರ್ನಾಟದಲ್ಲಿ ಬಹಳ ಕಾಲ ನಾಡಗೀತೆಯಾಗಿದ್ದು ಜನಜಾಗೃತಿಗೆ ಕಾರಣವಾಯಿತು. ೧೯೧೮ರ ಧಾರವಾಡ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಅದ್ಧೂರಿಯಾಗಿ ನಾಡಹಬ್ಬವಾಗಿ ಆಚರಿಸಲು ಸಿದ್ಧಗೊಂಡಾಗ ಸಂಘಟಕರಿಗೆ ಮೊದಲು ಎದುರಾದದ್ದು ಆರ್ಥಿಕ ಮುಗ್ಗಟ್ಟು. ಈ ಸಮಸ್ಯೆಯ ಪರಿಹಾರಕ್ಕಾಗಿ ವಯೋವೃದ್ಧರಾಗಿದ್ದರೂ ಕನ್ನಡ ಪ್ರೇಮದ ನಂಟಿನಿಂದಾಗಿ ಮನೆ ಮನೆಗೆ ತೆರಳಿ ಹಾಡಿ ಹಣ ಸಂಗ್ರಹಿಸಿದ್ದು ಅಂದಿನ ಸನ್ನಿವೇಶದಲ್ಲಿ ಅವರ ದೊಡ್ಡ ಸಾಧನೆ. ಕನ್ನಡಿಗರ ಮನಕರಗಿಸಿದ ಹಾಡನ್ನು ಇಲ್ಲಿ ಕಾಣಬಹುದು.

"ಬೇಡಲು ಕನ್ನಡ ದಾಸಯ್ಯ ಬಂದಾನೆ

ಕನ್ನಡ ಮಾತಿನ ತಂದೆ ತಾಯಿಗಳಿಂದ

ಚೆನ್ನಚೆನ್ನೆಯರೆಲ್ಲ ಹುಟ್ಟಿದಿರಿ

ಕನ್ನಡ ದೇಶದಿ ದೊಡ್ಡವರಾದಿರಿ

ಕನ್ನಡದಿಂದಲೆ ಶ್ರೀ ಮಂತರಾದಿರಿ

ಕನ್ನಡ ದೇಶದಿ ಹೆಸರಾದಿರಿ

ಅನ್ಯಭಾಷೆಗಳಂತೆ ಕನ್ನಡ ಭಾಷೆಗೆ

ಉನ್ನತಿಯ ತರಬೇಕೆಂದು

ಹೊನ್ನು ಕೂಡಿಸಲಿಕ್ಕೆ ಬಂದಿಹನಾತನು

ಮನ್ನಿಸಿ ನೀವೆಲ್ಲ ಕೊಡಬೇಕು

ಹೊಟ್ಟೆಗಿಲ್ಲದೆ ಬಂದ ದಾಸಯ್ಯ ನಿವನಲ್ಲ

ಕೊಟ್ಟಿದ್ದು ಬಿಟ್ಟು ಹೋಗವನಲ್ಲವು

ದಿಟ್ಟಿಸಿ ದಿಟ್ಟಿಸಿ ಕೊಡಬಂದ ಕೈಗಳ

ನೊಟ್ಟು ಸೇರಿಸಿ ಪದ ಕಟ್ಟುವನು"[೨೦]

ಈ ಪದ್ಯದಲ್ಲಿ ಕವಿಯು ಕನ್ನಡ ನುಡಿ ಹಾಗೂ ನಾಡಿನ ಬಗ್ಗೆ ಹೊಂದಿರುವ ಭಾವನಾತ್ಮಕ ಸಂಬಂಧವನ್ನು ಎತ್ತಿ ಹಿಡಿಯುವುದರೊಡನೆ ಆತನಿಗಿದ್ದ ಕನ್ನಡಾಭಿಮಾನದ ತುಯ್ತವನ್ನು ಕಾಣಬಹುದಾಗಿದೆ. ಇಲ್ಲಿ ಬಳಕೆಯಾಗಿರುವ ಭಾಷೆಯನ್ನು ಗಮನಿಸಿದಾಗ ಸಾಮಾನ್ಯನನ್ನು ಮುಟ್ಟಬಹುದಾದ ಸರಳ, ಸುಂದರ, ಸಂಗೀತಮಯ ಭಾಷೆಯಿರುವುದು ಹಾಗೂ ಹೊಸಗನ್ನಡದ ಎಲ್ಲ ಲಕ್ಷಣಗಳನ್ನು ಮೇಳೈಸಿಕೊಂಡು ಮೂರ್ತರೂಪ ಪಡೆದಿರುವುದನ್ನು ಗುರುತಿಸಬಹುದು. ಕರ್ನಾಟಕದ ಏಕೀಕರಣ ಚಳುವಳಿಗೂ ಸೂಕ್ಷ್ಮವಾಗಿ ಚಾಲನೆ ನೀಡಿರುವುದು ಕಂಡು ಬರುತ್ತದೆ.

ಶಾಂತ ಕವಿಗಳ ಕಟ್ಟಕಡೆಯ ಕೃತಿಯೆನ್ನಬಹುದಾದ 'ವಿದ್ಯಾರಣ್ಯ ವಿಜಯ'ವು ಕೀರ್ತನರೂಪದಲ್ಲಿ ಮೂರ್ತವೆತ್ತಿದೆ. ಭಾರತದಾದ್ಯಂತ ಬೀಸಿದ ಪುನರುಜ್ಜೀವನ ಗಾಳಿ ಕನ್ನಡಿಗರನ್ನೂ ತಟ್ಟಿರುವುದು ಸೂರ್ಯಸ್ಪಷ್ಟ. ಶಾಂತಕವಿಗಳಿಗೆ ಜನಪ್ರಿಯತೆ ತಂದುಕೊಟ್ಟ ಕೃತಿಗಳಲ್ಲಿ ಈ ಕೃತಿಯೆ ಮೇರುಕೃತಿ. ಕೀರ್ತನೆಗಳನ್ನು ತಾವೇ ಸ್ವತಃ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ತಾಳ ಹಾಕಿ ಕುಣಿತು ಕನ್ನಡಿಗರ ಚಿತ್ತವನ್ನೂ ಬಡಿದೆಬ್ಬಿಸಿದ್ದಾರೆ. ವಿದ್ಯಾರಣ್ಯ ವಿಜಯದ ತುಣುಕೊಂದನ್ನು ನೋಡಬಹುದು.

"ಏಳು ಸಾಯಣ ಕಟ್ಟು ಗ್ರಂಥದ

ನೇಳು ಪಂಪಾ ಕ್ಷೇತ್ರಕೆ

ಗಾಳಿ ಗಂಟುಗಳೋದಿದೇತಕೆ?

ಏಳು ಈ ಕ್ಷಣ ಮಾತ್ರಕೆ"[೨೧]

ಪದ್ಯದಲ್ಲಿನ ಸಾಲುಗಳು ಕರ್ನಾಟಕ ಗತವೈಭವವನ್ನು ಮರಳಿಪಡೆಯಲು ಯುವಜನಾಂಗದ ಸುಪ್ತಚೇತನವನ್ನು ಬಡಿದೆಬ್ಬಿಸುತ್ತಿರುವ ಕವಿಯ ಮನೋಭೂಮಿಕೆಯು ಸ್ತುತ್ಯರ್ಹವಾದುದು. ಶಾಂತ ಕವಿಗಳು ಕಾವ್ಯ ಭಾಷೆಯು ಎಲ್ಲಿಯೂ ಕ್ಲಿಷ್ಟತೆಗೆ ಅವಕಾಶ ಕಲ್ಪಿಸದೆ ತೀರಾ ಹೊಸದೆನ್ನುವ ಭಾಷೆಯೆನಿಸುತ್ತದೆ. ಮುಂದಿನ ಉದಯೋನ್ಮುಖ ಬರಹಗಾರರಿಗೆ ಶಾಂತಕವಿಗಳು ನೀಡಿದ ಬಹುದೊಡ್ಡ ಕೊಡುಗೆಯೆ ಹೊಸಗನ್ನಡದ ಭಾಷೆ. ಬಡತನದ ಬೇಗೆಯು ಅವರನ್ನು ಸುಡುತ್ತಿದ್ದರೂ ಬೆಂಕಿಯಲ್ಲಿ ಬಿದ್ದ ಪಕ್ಷಿಯು ತನ್ನ ರೆಕ್ಕೆ ಪೂರ್ಣ ಸುಟ್ಟು ಹೋಗುವವರೆಗೂ ಮೇಲಕ್ಕೆ ಹಾರಲು ಯತ್ನಿಸುವಂತೆ ತಮ್ಮ ಉಸಿರಿರುವವರೆಗೂ ಕನ್ನಡಕ್ಕಾಗಿ ದುಡಿದರೆಂಬುದು ಗಮನಾರ್ಹ.

**೧೦. ಹಟ್ಟಿಯಂಗಡಿ ನಾರಾಯಣರಾಯ (ಕ್ರಿ.ಶ. ೧೮೬೩-೧೯೨೧)**

ಕನ್ನಡ ಕಾವ್ಯಪರಂಪರೆಯನ್ನು ಅನನ್ಯವಾಗಿ ಅರಿತು ಇಂಗ್ಲಿಷ್ ಮಾರ್ಗಗಳ ಅನುಸರಣೆಯಿಂದ ಕನ್ನಡ ಕಾವ್ಯದ ಪುನರುತ್ಥಾನಕ್ಕೆ ಕಾಯಕಲ್ಪಕೊಡಬೇಕೆಂಬ ಕಲ್ಪನೆ ಹಟ್ಟಿಯಂಗಡಿ ನಾರಾಯಣರಾಯರದಾಗಿತ್ತು. ಬಹುಭಾಷಾಪಂಡಿತರಾಗಿದ್ದ ಇವರು ಕನ್ನಡ ಕವಿತೆಯು ಬೆಳೆಯ ಬೇಕಾದ ಹಾದಿಯನ್ನು ಕುರಿತು ಚಿಂತಿಸಿದರು. ಕಾವ್ಯದಲ್ಲಿ ಹೊಸವಸ್ತು, ಹೊಸರೂಪ, ಹೊಸ ಶೈಲಿ, ಹೊಸ ಭಾಷೆಗಳು ಒಡಮೂಡಿದಾಗ ಕಾವ್ಯವು ಮಹತ್ವಪೂರ್ಣವೆನಿಸುತ್ತದೆ ಎಂದು ಭಾವಿಸಿದ್ದ ಅವರು 'ಕನ್ನಡ ಕವಿತೆಯ ಭವಿತವ್ಯ' ಎಂಬ ಲೇಖನದಲ್ಲಿ "ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ... ಕವಿಗಳ ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರೀಯ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನ ಕೊಡುವರೆಂದೂ, ದೀರ್ಘ ಪುರಾಣಗಳ ಬದಲಾಗಿ ಲಘುಕಾವ್ಯಗಳನ್ನು ರಚಿಸುವರೆಂದೂ, ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದೂ, ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್‌ಶಕ್ತಿಯನ್ನೂ, ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನು ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಾಗಬಹುದಾಂದೂ ಹಳಗನ್ನಡಕ್ಕಿಂತ ನಡುಗನ್ನಡವನ್ನೆ ಹೆಚ್ಚಾಗಿ ಪ್ರಯೋಗಿಸುವರೆಂದು"[೨೨] ಸೂಚಿಸಿದ್ದಾರೆ.

ಮೇಲಿನ ನಾರಾಯಣರಾಯರ ಅಭಿಪ್ರಾಯದಲ್ಲಿ ಹೊಸತನದ ಆಲೋಚನೆಗಳು ಅಸ್ಪಷ್ಟವಾಗಿ ಗೋಚರಿಸುತ್ತವೆ. ಹೊಸಬಗೆಯ ಚಂದೋ ಪ್ರಕಾರಗಳು ಕನ್ನಡ ಕಾವ್ಯಕ್ಕೆ ಹೊಸ ದಿಕ್ಕನ್ನು ತೋರುತ್ತವೆ ಎಂದು ಭಾವಿಸಿದ ಅವರು ಮಿಲ್ಟನ್, ಗ್ರೇ, ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್, ಕಾಲಿನ್ಸ್, ಹೆನ್ರಿವೋಟನ್, ಜೇಮ್ಸ್ ಥಾಮ್ಸನ್, ಜೇನ್ ಟೇಲರ್, ಷೇಕ್ಸ್‌ಪಿಯರ್, ಲಾಂಗ್‌ಫೆಲೋ, ಎಮರ್ಸನ್, ಜಾನ್ ವೀಟ್ಟಿಯರ್ ಮುಂತಾದ ಶ್ರೇಷ್ಠ ಕವಿಗಳ ಆಂಗ್ಲಕವಿತೆಗಳನ್ನು ಶ್ರದ್ಧೆಯಿಂದ ಹೊಸ ಕನ್ನಡಕ್ಕೆ ಭಾಷಾಂತರಿಸಿ ಅವುಗಳನ್ನು ಸಂಗ್ರಹಿಸಿ 'ಅಂಗ್ಲ ಕವಿತಾವಳಿ' ಎಂಬ ಪುಸ್ತಕವನ್ನು ಕ್ರಿ.ಶ.೧೯೧೬ರಲ್ಲಿಯೇ ಪ್ರಕಟಿಸಿ ಕನ್ನಡಿಗರ ಗಮನ ಸೆಳೆದಿದ್ದಾರೆ. ಇದು ನವೋದಯದ ಹೆದ್ದಾರಿ ನಿರ್ಮಿಸಿದ ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತೆಗಳು' ಕವನ ಸಂಕಲನಕ್ಕಿಂತ ಮುಂಚಿತನವಾಗಿಯೇ ಪ್ರಕಟವಾಗಿರುವುದು ಗಮನಾರ್ಹ ಸಂಗತಿ. ಆದರೆ ನಾರಾಣರಾಯರು ನವೋದಯ ಕಾವ್ಯದ ಯುಗಪ್ರವರ್ತಕರೆನಿಸದಿರುವುದು ವಿಷಾದವೆನಿಸಿದರೂ ವಾಸ್ತವ.

ಬಿ.ಎಂ.ಶ್ರೀಯವರ ಕಾವ್ಯಗಳಲ್ಲಿ ಭಾವಾನುವಾದ ಹಾಗೂ ಶಬ್ದಾನುವಾದಗಳೆರಡೂ ಪ್ರಖರವಾಗಿ ಹೊಮ್ಮಿರುವುದು ಕಂಡು ಬಂದರೆ ನಾರಾಯಣರ ಕಾವ್ಯಗಳಲ್ಲಿ ಕೇವಲ ಶಬ್ದಾನುವಾದಕ್ಕೆ ಆದ್ಯತೆ ನೀಡಿ ಭಾವಕ್ಕೆ ಕುತ್ತು ತಂದಿರುವುದು ಕಾಣುತ್ತದೆ. ಹೀಗಾಗಿ ಶ್ರೀಯವರ ಕಾವ್ಯಾನುವಾದವು ಶ್ರೇಷ್ಠತೆಯಲ್ಲಿ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದೆ. ಸರ್ ಹೆನ್ರಿ ವಾಟನ್‌ನ 'Character of a Happy life' ಎಂಬ ಕವನಗಳ ಭಾಷಾಂತರದಲ್ಲಿ ನಾರಾಯಣರಾಯರು ಹಾಗೂ ಶ್ರೀಯವರ ನಡುವಿನ ಅಂತರವನ್ನು ಕಾಣಬಹುದು.

**ಮೂಲ-ಶೀರ್ಷಿಕೆ:** Character of a Happy life'

"How Happy is he born or taught

That serveth not another's will

Whose armour is his honest thought

And silly truth his highest skill

**ನಾರಾಯಣರಾಯರು:** ಶೀರ್ಷಿಕೆ: 'ನಿತ್ಯಸುಖಿ'

ಪರರ ತುಷ್ಟಿಗೆ ದಣಿಯದವನ ಸುಖಕೆಣೆಯೆಲ್ಲಿ

ಸರಲ ಭಾವದ ಕವಚದಂತೆ ರಕ್ಷಣವೆಲ್ಲಿ

ಸತ್ಯಶೀಲತೆ ನಿತ್ಯಸುಖಿಗೆ ಬಲು ಜಾಣತನ

ಭೃತ್ಯರಂತರ್ಪಿಸುವುದಿಂದ್ರಿಯಗಳಾಳುತನ

**ಶ್ರೀಯವರು;** ಶೀರ್ಷಿಕೆ; 'ಸುಖಜೀವನ'

ಏನುಸುಖಿಯೋ ತಾನು ಹುಟ್ಟಿನಲಿ ಕಲಿಕೆಯಲಿ

ಇನ್ನೊಬ್ಬ ನಿಚ್ಛೆಯನು ದುಡಿಯದಿರುವವನು

ಒಳ್ಳಿತನು ಬಗೆವುದೇ ತನ್ನ ಕಾಯುವ ಯಂತ್ರ

ನಿಜದಿನಡತೆಯ ತಂತ್ರ ತನಗೆನಿಸಿದವನು"[೨೩]

ಈ ಭಾಷಾಂತರ ಕಾರ್ಯದಲ್ಲಿ ಶ್ರೀಯವರು ಶೀರ್ಷಿಕೆಯನ್ನು ನೀಡುವಾಗಲೇ ನಾರಾಯಣರಾಯರಿಗಿಂತ ಪ್ರಬುದ್ಧತೆ ಮೆರೆದಿರುವುದು ಕಂಡು ಬರುತ್ತದೆ. ಹೊಸಗನ್ನಡದ ಸಂಧಿಕಾಲದ ಸಂಧಿಗ್ಧತೆಗಳು ಶ್ರೀಯವರನ್ನು ಕಾಡದಿದ್ದರೂ ನಾರಾಯಣರಾಯರನ್ನು ಕಾಡಿರುವುದು ಎದ್ದು ಕಾಣುತ್ತದೆ. ಶ್ರೀಯವರು ಮೂಲಕವಿಯ ಭಾವನೆಗೆ ಧಕ್ಕೆ ತಾರದಂತೆ ಅನುವಾದಿಸಿದ್ದರೆ ನಾರಾಯಣರಾಯರು ತಮಗೆ ಅನುಕೂಲವಾಗುವಂತೆ ಕೆಲವನ್ನು ಬಿಟ್ಟು, ಕೆಲನುಡಿಗಳನ್ನು ಹೊಸದಾಗಿ ಸೇರಿಸಿ, ಮತ್ತೆ ಕೆಲ ಸಾಲುಗಳನ್ನು ಹಿಂದೆ ಮುಂದೆ ಮಾಡಿದ್ದಾರೆ. 'ಭೃತ್ಯರಂತರ್ಪಿಸುವುವಿಂದ್ರಿಯಗಳಾಳುತನ' ಎಂಬ ನಾರಾಣರಾಯರ ಅನುವಾದದಲ್ಲಿ ಸಂಸ್ಕೃತದ ಪ್ರಭಾವ ಬಿಡದೇ ಕಾಡಿರುವುದು ಗೋಚರಿಸುತ್ತದೆ. ಆದ್ದರಿಂದ "ಪಕ್ಷಪಾತವಿಲ್ಲದ ಕವಿಗಳಿಗೆ ಹೊಸಗನ್ನಡದ ವಿಜಯಘೋಷ ಸ್ಪಷ್ಟವಾಗಿ ಕೇಳಿಬಂದದ್ದು 'ಇಂಗ್ಲಿಷ್ ಗೀತೆಗಳು' ಪ್ರಕಟಗೊಂಡ ನಂತರವೇ"[೨೪] ಎಂಬ ತೀ.ನಂ.ಶ್ರೀಯವರ ಮಾತು ಅರ್ಥಪೂರ್ಣವೆನಿಸುತ್ತದೆ.

ಹಟ್ಟಂಗಡಿ ನಾರಾಯಣರಾಯರು ತಮ್ಮ ಸಮಕಾಲೀನ ಸನ್ನಿವೇಶದಲ್ಲಿ ಕನ್ನಡ ಕಾವ್ಯಪರಂಪರೆಗೆ ಹೊಸತನದ ಮೆರಗು ನೀಡಿದ್ದೇ ಒಂದು ಮಹತ್ಸಾಧನೆ. ಆಂಗ್ಲರಮ್ಯಕಾವ್ಯದೆಡೆಗೆ ಆಕರ್ಷಿತರಾಗಿದ್ದ ಅವರು ಅಚ್ಚಗನ್ನಡದಲ್ಲಿ ಸ್ವಂತ ಕವಿತೆಗಳನ್ನೂ ರಚಿಸಿದ್ದಾರೆ. ಸಮಾಜ ಸುಧಾರಣೆಯ ಸೆಳೆತಕ್ಕೆ ಒಳಗಾಗಿ ರಾಜಾರಾಮಮೋಹನರಾಯರ ಸಿದ್ಧಾಂತಗಳಿಗೆ ಮಾರುಹೋಗಿದ್ದರು. ರಾಷ್ಟ್ರೀಯ ಪುನರುತ್ಥಾನದ

ಸಂದರ್ಭದಲ್ಲಿ ಅವರ ಸ್ವರಚಿತ ಕವಿತೆಯ ಸಾಲುಗಳನ್ನು ನೋಡಿ,

"ಧನ್ಯವಾಗಲಿ, ಹಿರಿಯ ಸಿರಿವಡೆದ ಕರುನಾಡು
ಧಾನ್ಯ, ಧನ, ವಿಜ್ಞಾನ ಕೋಶವೆನಿಸಿ
ಕನ್ನೆಯರೇ, ಯುವಜನರೇ ಮಹಾತ್ಮವನು ಬಯಸಿ
ಮಾನ್ಯರಾಗುವ ಜನರ ದೇಶವೆನಿಸಿ"
.....................
....................
ಧನ್ಯ ಸಮಯವಿದು ದೈನ್ಯದಿಂದೀಶಗೆ
ಅನನ್ಯ ಶರಣಾದೆ ನನ್ನಿಯಿಂದಲಿ
ಭಿನ್ನ ಧರ್ಮಗಳಲಿ ಉನ್ನತೋನ್ನತನೆಂದು
ಸನ್ನುತಿ ಪಡೆದನ ಮನ್ನಿಸಿ ಪೊಗಳುವೆ"[೨೫]

ಸಂಸ್ಕೃತ ಭೂಯಿಷ್ಠತೆಯ ಆರ್ಭಟದಲ್ಲಿ ಇನ್ನೂ ಹದಗೊಳ್ಳದ ಮತ್ತು ಅಭಿವ್ಯಕ್ತಿಗೆ ತಕ್ಕಂತೆ ಸರಾಗವಾಗಿ ಪಳಗದ ಕನ್ನಡ ಭಾಷೆಯನ್ನು ಬಳಸುವ ಅನಿವಾರ್ಯತೆ ನಾರಾಯಣರಾಯರಿಗಿತ್ತೆಂಬ ಅರಿವು ಓದುಗರಿಗಿರಬೇಕು. ಕನ್ನಡ ಭಾಷೆಯನ್ನು ಹೊಸತನಕ್ಕೆ ಪಳಗಿಸಿ, ಹದಗೊಳಿಸಿ, ಕಾವ್ಯಗಳನ್ನು ರಚಿಸಿದ್ದಾರೆಂಬುದನ್ನು ಮೇಲಿನ ಪದ್ಯಗಳು ಸಮರ್ಥಿಸುತ್ತವೆ. ಒಟ್ಟಾರೆಯಾಗಿ ಹೊಸತನ ಎಲ್ಲ ಲಕ್ಷಣಗಳನ್ನೊಳಗೊಂಡ ಕನ್ನಡ ಕಾವ್ಯರಚಿಸಿದ ಆರಂಭಕಾಲದ ಅಗ್ರಗಣ್ಯರಲ್ಲಿ ನಾರಾಯಣರಾಯರೂ ಒಬ್ಬರಾಗಿದ್ದಾರೆ ಎಂದು ನಿಸ್ಸಂಕೋಚದಿಂದ ಹೇಳಬಹುದಾಗಿದೆ.

### ೧೧. ಪಂಜೆ ಮಂಗೇಶರಾಯ (ಕ್ರಿ.ಶ.೧೮೭೪-೧೯೩೭)

ಹೊಸಗನ್ನಡ ಸಾಹಿತ್ಯದ ಸೀಮಾಪುರುಷರಗಲ್ಲಿ ಪಂಜೆ ಮಂಗೇಶರಾಯರ ಹೆಸರು ಅಚ್ಚಳಿಯದೆ ಉಳಿದಿದೆ. ತುಳು ನಾಡಿನ ಕನ್ನಡ ಸಾಹಿತ್ಯ ಮೂರ್ತಿಯಾದ ಅವರು ತಮ್ಮ ಉತ್ಕೃಷ್ಟ ಸಣ್ಣಕಥೆ, ಪ್ರಬಂಧ ಲೇಖನ, ಶಿಶುಗೀತೆ ಕವನಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ಚೈತನ್ಯ ತುಂಬುವ ಮೂಲಕ ಸಮೃದ್ಧಗೊಳಿಸಿದ್ದಾರೆ. ಶಾಲಾ ಮಾಸ್ತರರಾಗಿದ್ದ ಪಂಜೆಯವರು ಹಳ್ಳಿಯ ಬದುಕನ್ನು ಕಣ್ಣಾರೆ ಕಂಡು, ಮಕ್ಕಳೊಡನೆ ಅನನ್ಯ ಅಕ್ಕರೆ ಹೊಂದಿದ್ದು, ಮಕ್ಕಳಿಗಾಗಿ ಹೊಸಗನ್ನಡದಲ್ಲಿ ಸಮೃದ್ಧವಾಗಿ ಪದ್ಯಗಳನ್ನು ಬರೆಯುವ ಮೂಲಕ ಹೊಸ ಹೊಸ ಪ್ರಯೋಗಗಳಿಗೆ ಕೈಹಾಕಿದ್ದಾರೆ. ಅಪೂರ್ವವೆನಿಸುವ ಕವಿತೆಗಳಾದ 'ತೆಂಕಣಗಾಳಿಯಾಟ', ಹುತ್ತರಿ ಹಾಡು, ನಾಗರಹಾವು, ನಾಗಣ್ಣನ ಕನ್ನಡಕ, ಮುಂತಾದವು ಕನ್ನಡ ಕಾವ್ಯದ

ದಿಕ್ಕನ್ನೇ ಬದಲಿಸಿ ಹೊಸಗನ್ನಡ ಕಾವ್ಯದ ಆರಂಭಕಾಲದಲ್ಲಿ ತಮ್ಮದೇ ಆದ ಛಾಪನ್ನು ಒತ್ತಿವೆ. "ಸುತ್ತಲಿನ ವಾತಾವರಣಕ್ಕೆ ಪ್ರತಿಸ್ಪಂದಿಯಾಗಿ ಸ್ವಚ್ಛಂದವಾಗಿ ಹಾಡಬೇಕೆಂಬ ಮನೀಷೆಯಿಂದ ಕೆಲವರು ಮುಂದೆ ಬಂದರು. ಮಂಗ್ಳೂರಿನ ಪಂಜೆ ಮಂಗೇಶರಾಯರು ಶಾಲೆಯಲ್ಲಿ ಕಲಿಯುವ ಹುಡುಗರಿಗಾಗಿ ಹೊಸ ಪದ್ಯಗಳನ್ನು ರಚಿಸತೊಡಗಿದರು. ಗಾಳಿಯಂತೆ ಹಗುರವಾದ ಸಹಜ ಸುಂದರವಾದ ಇವರ ಕವಿತೆಗಳಲ್ಲಿ ನವೋದಯದ ಸ್ವಾತಂತ್ರ್ಯ ಮಿಡಿಯುತ್ತದೆ."[೨೬] ಪಂಜೆಯವರು ಹೊಸಗನ್ನಡದ ಆರಂಭದಲ್ಲಿಯೇ ಕಾವ್ಯ ಕೃಷಿ ಮಾಡಿದ್ದಾರಾದರೂ ಅವರು ಬಳಸಿರುವ ಭಾಷೆ ತೀರ ಹೊಸದೆನಿಸುವ ಬಾಲಭಾಷೆಯಾಗಿದೆ.

ಅವರ ಕವಿತೆಗಳನ್ನು ಶಿಶುಗೀತೆಗಳು, ಬಾಲಗೀತೆಗಳು, ಜೋಗುಳದ ಹಾಡುಗಳು, ನಡತೆಯ ಗೀತೆಗಳು ಭಾವಗೀತೆಗಳು, ಪ್ರಕೃತಿಗೀತೆಗಳು, ದೇಶಭಕ್ತಿಗೀತೆಗಳು, ಕಥನ-ಕವನಗಳು ಎಂದು ವರ್ಗೀಕರಿಸಬಹುದಾಗಿದೆ. ಪಂಜೆಯವರ ಬಹುಪಾಲು ಎಲ್ಲ ಕವನಗಳಲ್ಲಿ "ಜನಪದಗೀತೆಯ ಸೊಗಡು ಮಣ್ಣಿನ ವಾಸನೆ, ನವಿರಾದ ಭಾವನೆ, ಹೃದಯವಂತಿಕೆ, ಸರಳತೆ, ಮಧುರವಾದ ಪದಬಂಧ, ರಸಾರ್ದ್ರತೆ, ಲಲಿತವೂ ಪ್ರಸನ್ನವೂ ಆದ ನಡೆ-ಎಲ್ಲವೂ ಅತ್ಯಂತ ಸಹಜವಾಗಿರುವುದು ಎದುರ ಕಾಣುವ ಅಂಶ"[೨೭] ಕವಿತೆಗಳನ್ನು ರಚಿಸುವಾಗ ಪಂಜೆಯವರಲ್ಲಿ ರಕ್ತಗತವಾಗಿದ್ದ ದೇಸೀಯತೆಯೇ ಮೇಲುಗೈ ಸಾಧಿಸಿ ಅತ್ಯಂತ ಭಾವಪೂರ್ಣವಾಗಿ ಸಂವೇದನಾಶೀಲವಾಗಿ ಮೂರ್ತ ರೂಪ ಪಡೆದಿರುವುದು ಅವರ ಕವಿತೆಗಳಲ್ಲಿಯೇ ಕಾಣಸಿಗುತ್ತದೆ.

ಪಂಜೆಯವರು ಬಳಸುತ್ತಿದ್ದ ಪದಲಾಲಿತ್ಯ, ಪ್ರಾಸ, ಒಳಪ್ರಾಸ, ಛಂದಸ್ಸಿನ ಲಯಗತಿ, ನಾದಮಾಧುರ್ಯ, ಸರಳತೆ, ಸೊಬಗತೆಯನ್ನು ಅವರ 'ಹಾವಿನ ಹಾಡು' ಪದ್ಯದಲ್ಲಿ ಕಾಣಬಹುದು.

"ನಾಗರ ಹಾವೆ ಹಾವೊಳು ಹೂವೆ
ಬಾಗಿಲ ಬಿಲದಲಿ ನಿನ್ನಯ ಠಾವೆ
ಕೈಗಳ ಮುಗಿವೆ ಹಾಲನೀವೆ
ಬಾ ಬಾ ಬಾ ಬಾ ಬಾ ಬಾ ಬಾ
ಹಳದಿಯ ಹೆಡೆಯನು ಬಿಚ್ಚೋಬೇಗಾ
ಹೊಳಹಿನ ಹೊಂದಲೆ ತೂಗೋ ನಾಗಾ
ಕೊಳಲನ್ನೂಡುವೆ ಲಾಲಿಸು ರಾಗಾ
ನೀ ನೀ ನೀ ನೀ ನೀ ನೀ ನೀ ನೀ ನೀ "[೨೮]

ಪಂಜೆಯವರ ಹೆಸರನ್ನು ಇಂದಿಗೂ ಕೊಡಗಿನ ಪ್ರತಿಯೊಬ್ಬರಲ್ಲಿಯೂ ಚಿರಸ್ಥಾಯಿಯಾಗಿಸಿರುವ "ಹುತ್ತರಿ ಹಾಡು" ಕೊಡವರ ನಾಡಗೀತೆಯಾಗಿದೆ. ಈ ಪದ್ಯದಲ್ಲಿ ಕೊಡಗಿನ ಸೌಂದರ್ಯ, ಇತಿಹಾಸ, ಸ್ಥಳ ಪುರಾಣ, ಧೈರ್ಯ, ಶೌರ್ಯ, ಔದಾರ್ಯ, ದೇಶಾಭಿಮಾನ, ಇವೆಲ್ಲವನ್ನು ಒಟ್ಟಂದವಾಗಿ ಒಂದೇ ಹಾಡಿನಲ್ಲಿ

ಸೆರೆಹಿಡಿಯುವಲ್ಲಿ ಯಶಸ್ವಿಯಾಗಿರುವವರು ಪಂಜೆ ಒಬ್ಬರೆ, ಕವಿಯ ಪದಗಳಲ್ಲೇ ನೋಡೋಣ.

"ಸವಿದು ಮೆದ್ದರೂ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು
ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು
ಸವರಿ ಆನೆಯ ಸೊಂಡಿಲಲಿ ರಣಕೊಂಬನಾರ್ ಭೋರ್ಗರೆದರೋ
ಸವೆದು ಸವೆಯದ ಸಾಹಸತ್ವದ ಕ್ಷಾತ್ರ ಬೇಟೆಯ ಮೆರೆದರೋ
ಅವರೆ ಸೋಲ್ ಸಾವರಿಯರು
ಅವರೆ ಕಡುಗಲಿ ಗರಿಯರು
ಅವರೆ ಕೊಡಗಿನ ಹಿರಿಯರು"

....................

ಒಮ್ಮ ತವು ಒಗ್ಗಟ್ಟು ಒಂದೆ ಮನವು ಎಲ್ಲಿದೆ ಹೇಳಿರಿ
ಸುಮ್ಮನಿತ್ತರೋ ದಟ್ಟಿಕುಪ್ಪಸ, ಹಾಡು ಹುತ್ತರಿಗೇಳಿರಿ
ಚಿಮ್ಮಿ ಪಾತುರೆಕೋಲ ಹುಯ್ಲಿಗೆ ಕುಣಿವ ಪದ ಹೊರ ಹೊಮ್ಮಲಿ
ಅಮ್ಮೆ ಹರಸಿದ ಸೀಮೆ ನಮಗಿದು ಇರಲಿ ನಮ್ಮದೆ ನಮ್ಮಲಿ"[೨೯]

ಮೇಲಿನ ಕವನದ ಸಾಲುಗಳಲ್ಲಿ ಕೊಡವರ ಸಾಹಸಗಳು ಕಣ್ಮುಂದೆ ನಿಲ್ಲುತ್ತವೆ. ಅವರ ವೇಷಭೂಷಣ, ಪ್ರಕೃತಿಯೊಡನೆ ಸಂಭ್ರಮಿಸುವ ರೀತಿಗಳನ್ನು ಕವಿಯು ಎಳೆಎಳೆಯಾಗಿ ಹೊಸಗನ್ನಡ ಭಾಷೆಯಲ್ಲಿ ಬಿಡಿಸಿಟ್ಟಿರುವುದು ಗಮನಾರ್ಹ.

ಪಂಜೆಯವರ ಕಾಲಕ್ಕಾಗಲೇ ನವೋದಯ ಕಾವ್ಯದ ಲಕ್ಷಣಗಳು ರೂಪುಗೊಳ್ಳುತ್ತಿರುವುದು ತಿಳಿಯುತ್ತದೆ. ಕಾವ್ಯದ ವಸ್ತುವಿನ ಆಯ್ಕೆಯಲ್ಲಿ ಕವಿಯು ಹೊಸತನ ಮೆರೆದು ನಿಸರ್ಗ ಪ್ರೀತಿ, ಪ್ರಕೃತಿಯಾರಾಧನೆ, ಆಂತರಂಗಿಕ ನೋವು-ನಲಿವುಗಳು, ಸ್ವಾಭಿಮಾನ, ಸ್ವಾತಂತ್ರ್ಯದ ಹಂಬಲ, ಸಂಸ್ಕೃತಿಯ ಪುನರುತ್ಥಾನ ಮುಂತಾದವು ಸ್ಥಾನ ಪಡೆಯುತ್ತವೆ ಪಂಜೆಯವರು ನವೋದಯ ಕನ್ನಡದ ಕಾವ್ಯಶಿಖರ ಮತ್ತು ಸಂಧಿಕಾಲದ ಸಂಕ್ರಮಣ ಸ್ಥಿತಿಯಲ್ಲಿ ಚೈತನ್ಯಪೂರ್ಣಕವಿಯಾಗಿ ಹೊರ ಹೊಮ್ಮುತ್ತಾರೆ. ಕನ್ನಡದಲ್ಲಿ 'ಅಣ್ಣನವಿಲಾಪ' ಎಂಬ ಶೋಕಗೀತೆಯನ್ನು ರಚಿಸುವ ಮೂಲಕ ಶೋಕಗೀತೆ ಬರೆದ ಆಚಾರ್ಯ ಪುರುಷರೆನಿಸಿದ್ದಾರೆ. ಹೀಗೆ ಕನ್ನಡದಲ್ಲಿ ಹೊಸತನವನ್ನು ವಸ್ತು, ಭಾಷೆ, ಶೈಲಿಗಳಲ್ಲಿ ಅಳವಡಿಸಿ ಹೇರಳ ಕಾವ್ಯಕೃಷಿ ಮಾಡುವ ಮೂಲಕ ಹೊಸಗನ್ನಡ ಕಾವ್ಯದ ಆರಂಭದ ಕಟ್ಟಾಳುಗಳಲ್ಲಿ ಪಂಜೆಯವರ ಹೆಸರು ಅನನ್ಯ, ಅನುಪಮವಾದುದು.

**೧೨. ಮಂಜೇಶ್ವರ ಗೋವಿಂದ ಪೈ (ಕ್ರಿ.ಶ.೧೮೮೩-೧೯೬೩)**

"ಹೊಸಗನ್ನಡಕ್ಕೆ ದಕ್ಷಿಣಕನ್ನಡದ ಗುರುಜನು ಮೂವರು ಕಿರುಗವನದ, ಕಿರುಗವಿತೆಗಳ ಕೊಂಡಾಟದ

ಪಂಜೆಯವರು, ಪ್ರಾಸಭಂಜಕ ದೇಶವಿದೇಶ ಕಾವ್ಯಮಾರ್ಗ ಮಹಾರಥಿಕ, ಸಂಶೋಧಕ ಮನೋರಾಜಕ ಪೈಯವರು, ಹಳೆಗನ್ನಡ ಕಾವ್ಯಾರಣ್ಯ ಕೇಸರಿ, ಪ್ರೌಢವಿದ್ಯಾರ್ಥಿ ಮನೋಹಾರಿ ಮುಳಿಯರವರು"[೩೦] ಎಂದು ದಕ್ಷಿಣ ಕನ್ನಡದ ಮತ್ತೋರ್ವ ಸಾಹಿತಿ ಸೇಡಿಯಾಪು ಕೃಷ್ಣಭಟ್ಟರು ಬಣ್ಣಿಸಿದ್ದಾರೆ. ಬಹುಭಾಷಾ ಪಂಡಿತರಾದ ಪೈಯವರು ತಮ್ಮ ಜ್ಞಾನಕ್ಷಿತಜದ ಪ್ರತಿಭೆಯಲ್ಲಿ ಪ್ರಖರವಾದ ಹೊಳಹುಗಳನ್ನೂ ಹೊರಗೆಡಹುದಕ್ಕಾಗಿ ಕೈಗೊಂಡ ದಿಟ್ಟ ನಿರ್ಧಾರಗಳು ಮಹತ್ವಪೂರ್ಣವಾಗಿವೆ. ಕನ್ನಡ ಕಾವ್ಯಸಾಗರಕ್ಕೆ ಪೈ ಅವರ 'ಗಿಳಿವಿಂಡು', 'ನಂದಾದೀಪ', 'ಇಂಗಡಲು', ಕವನಸಂಕಲನಗಳು, 'ಗೊಲ್ಗೊಥಾ' ಮತ್ತು 'ವೈಶಾಖ' ಎಂಬ ಖಂಡಕಾವ್ಯಗಳು ಸೇರ್ಪಡೆಯಾಗಿವೆ. ಅಸಾಧಾರಣ ವಿದ್ವತ್ತು, ಅಪೂರ್ವ ಪಾಂಡಿತ್ಯ, ಬಹುಭಾಷಾ ಅರಿವುಗಳೆಲ್ಲ ಮುಪ್ಪುರಿಗೊಂಡು ಕಾವ್ಯವು ಸಮಷ್ಟಿದೃಷ್ಟಿಯಿಂದ ಸೃಷ್ಟಿಯಾಗಿರುವುದು ಪೈ ಅವರ ಕಾವ್ಯಗಳಲ್ಲಿ ಕಾಣಸಿಗುತ್ತದೆ. ಅವರ ಕಾವ್ಯಗಳಲ್ಲಿ ದೇಶಭಕ್ತಿ, ದೈವಭಕ್ತಿ, ಮಾನವೀಯತೆ, ನಿಸರ್ಗಪ್ರೇಮ ದರ್ಶನವಾಗುವುದು ಸಹಜ. ದೇಶಭಕ್ತಿಯು ತಮ್ಮ ತವರುನಾಡಾದ ತುಳುನಾಡಿನಲ್ಲಿ ಮೊಳಕೆಯೊಡೆದು ಅಖಂಡ ಕರ್ನಾಟಕದಲ್ಲಿ ಹಬ್ಬಿ ಭಾರತಾಂಬೆಯ ಮುಡಿಯಲ್ಲಿ ಸುಗಂಧ ಪುಷ್ಪವಾಗಿ ಸುವಾಸನೆಯನ್ನು ಬೀರುತ್ತದೆ.

ಸತ್ವಶಾಲಿ ಪದಪುಂಜಗಳನ್ನು ಬಳಸಿ ಕವನ ರಚಿಸುವ ಅವರು ಪದಗಳನ್ನು ನವಿರಾಗಿಸಿ ಸಾಮಾನ್ಯರೂ ಗ್ರಹಿಸಬಹುದಾದ ಸರಳ ಭಾಷೆಯನ್ನೂ ಕಾಯಭಾಷೆಯನ್ನಾಗಿಸಿಕೊಂಡಿದ್ದರು. ತನ್ನ ತಾಯಿನಾಡಿಗಾಗಿ ಪೈ ಅವರ ಅಂತರಂಗವು ಮಿಡಿಯುವುದು ಹೀಗೆ,

"ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೇ
ಹರಸ ತಾಯೆ, ಸುತರಕಾಯೆ, ನಮ್ಮ ಜನ್ಮದಾತೆಯೇ
ನಮ್ಮ ತಪ್ಪನೆನಿತೋ ತಾಳ್ವೆ;
ಅಕ್ಕರೆಯಿಂದೆಮ್ಮನಾಳ್ವೆ
ನೀನೆ ಕಣಾ ನಮ್ಮ ಬಾಳ್ವೆ;
ನಿನ್ನ ಮರೆಯಲಮ್ಮೆವು
ತನು ಕನ್ನಡ, ಮನ ಕನ್ನಡ, ನುಡಿಕನ್ನಡವೆಮ್ಮವು"[೩೧]

ಈ ಹಾಡು ಕನ್ನಡಿಗರ ಮನ ಮನಗಳಲ್ಲಿ, ಮನೆಮನೆಗಳಲ್ಲಿ ವಿರಾಜಮಾನವಾಗಿ ನೆಲೆಗೊಂಡಿತ್ತು. ಕನ್ನಡಾಂಬೆಯ ಹಿರಿಮೆ-ಗರಿಮೆಯನ್ನು ಕವಿಯು ದೈನ್ಯತೆಯಿಂದ ನಿವೇದಿಸಿಕೊಳ್ಳುತ್ತಲೇ ತನ್ನವರ ರಕ್ಷಣೆಗೂ ಮನವಿ ಮಾಡಿಕೊಳ್ಳುತ್ತಾನೆ. ನಾಡಿನ ಉದ್ದಗಲಕ್ಕೂ ಹರಡಿದ ಈ ಗೀತೆ ಕನ್ನಡಿಗರಲ್ಲಿ ಕನ್ನಡ ನಾಡು, ನುಡಿ, ಸಂಸ್ಕೃತಿಗಳ ಬಗೆಗೆ ಗಂಭೀರವಾಗಿ ಚಿಂತಿಸುವಂತೆ ಮಾಡಿತು.

ಪ್ರಾಚೀನ ಛಂದೋನಿಯಮಗಳಿಗಧೀನವಾದ ಕಾವ್ಯ ಪರಂಪರೆಯು ನಿರಾತಂಕವಾಗಿ

ನಿರ್ಮಾಣವಾಗುತ್ತಿದ್ದ ಸಂದರ್ಭದಲ್ಲಿ ಪ್ರಾಸ ತ್ಯಾಗದ ಬಗ್ಗೆ ಚಿಂತಿಸತೊಡಗಿದ್ದ ಅವರು ದೃಢಸಂಕಲ್ಪ ಮಾಡಿದ್ದು ಹೀಗೆ "೧೯೧೧ನೇ ಏಪ್ರಿಲ್ ತಿಂಗಳಿನಲ್ಲಿ ನಾನು ಸುಮಾರು ಒಂದು ತಿಂಗಳು ಬರೋಡಾ ರಾಜ್ಯದ ನವ ಸಾರಿ ಎಂಬಲ್ಲಿದ್ದೆ, ಆಗ್ಗೆ ಒಂದು ಮುಂಜಾನೆ ಮಾಳಿಗೆಯಲ್ಲಿ ಶತಪಥಗೆಯ್ಯುತ್ತಿದ್ದಾಗ ಹಠಾತ್ತಾಗಿ, ಆಗೋದು ಹೋಗೋದು ದೇವರ ಇಚ್ಛೆ, ಹೂಡೋದು ಬಿತ್ತೋದು ನನ್ನ ಇಚ್ಛೆ, ಇನ್ನು ಮೀನ ಮೇಷ ನೋಡದೆ ಪ್ರಾಸವನೀಗಲೇ ನನ್ನ ಇಚ್ಛೆ, ಇನ್ನು ಮೀನ ಮೇಷ ನೋಡದೆ ಪ್ರಾಸವನೀಗಲೇ ತೊರೆದು ಬಿಡುವುದೇ ನಿಶ್ಚಯಂ"[೩೨] ಎಂದು ತೀರ್ಮಾನಿಸಿ ಕನ್ನಡ ಕಾವ್ಯವಲಯದಲ್ಲಿ ದೊಡ್ಡಕ್ರಾಂತಿ ಮಾಡಿದರು. ಪ್ರಾಸರಹಿತವಾಗಿ ರಚಿಸಿದ 'ಹೊಲೆಯನು ಯಾರು' ಎಂಬ ಕವಿತೆಯು 'ಸ್ವಾಭಿಮಾನಿ' ಪತ್ರಿಕೆಯಲ್ಲಿ ಪ್ರಕಟವಾಯಿತು.

"ಹೊಲೆಯನಾರೂರ ಹೊರಗಿರುವವನೆ ಗೆಳೆಯ?

ಜಾತಿಯಿಂದಲ್ಲ ಗುಣದಿಂದಹನು ಹೊಲೆಯ

ಇಬ್ಬರಾಡುವಗುಟ್ಟು ಕದ್ದು ಕೇಳುವ ಹೊಲೆಯ

ಗಂಡಹೆಂಡಿರ ಬೇರೆ ಮಾಡುವವ ಹೊಲೆಯ

ಚಾಡಿ ಮಾತಾಡಿ ಭೇದವ ಕಲ್ಪಿಪನೆ ಹೊಲೆಯ,

ಒಣ ಹರಟೆಯೆಂ ಕಾಲ ಕಳೆಯುವವ ಹೊಲೆಯ"[೩೩]

ಪೈ ಅವರ ಪ್ರಾಸತ್ಯಾಗ ಕ್ರಮವನ್ನು ವಿದ್ವತ್‌ಪಂಡಿತರು ಖಂಡಿಸಿದರು, ಕಟಕಿಯಾಡಿದರು, ಆದರೆ ಏಕಾಂಗಿಯಾಗಿ ನಡೆದ ಕಾಲು ಹಾದಿಯೇ ಮುಂದೆ ನವೋದಯ ಕವಿಗಳಿಗೆ ಹೆದ್ದಾರಿಯಾಯಿತೆಂಬುದು ಉಲ್ಲೇಖಾರ್ಹ. ನವೋದಯಪೂರ್ವ ಸಂದರ್ಭದಲ್ಲಿ ಸಾಮಾಜಿಕ ವ್ಯವಸ್ಥೆಯ ಸ್ಥಿತ್ಯಂತರಗಳು ಕವಿಯ ಮನಸ್ಸನ್ನು ಜಾಗೃತಗೊಳಿಸಿರುವುದನ್ನು ಕಾಣಬಹುದು. "ರಾಷ್ಟ್ರೀಯತೆಯ ಪರವಾಗಿದ್ದವರು ದೇಶಪ್ರೇಮ, ಸಾಮಾಜಿಕ ಪರಿವರ್ತನೆಯಕಡೆ ಒಲಿದರು. ಕೆಲವರು ಹಳೆಯ ಧೋರಣೆಗೆ ಕಟ್ಟುಬಿದ್ದರೆ, ಗಾಂಧೀಜಿಯ ನಿಲುವುಗಳನ್ನು ತಾತ್ವಿಕವಾಗಿ ಒಪ್ಪಿಕೊಂಡವರೂ ಇದ್ದರು. ಸಮಾನತೆಯಿಂದ ರಾಷ್ಟ್ರೀಯತೆಗೆ ನಿಜವಾದ ಅರ್ಥ ಪ್ರಾಪ್ತವಾಗುತ್ತದೆ, ಜಾತಿವಿನಾಶವಾಗಬೇಕೆಂಬ ಆಶಯವುಳ್ಳ ಕವಿತೆಗಳು ಬಂದವು."[೩೪]

ಗೋವಿಂದ ಪೈ ಅವರು ಕನ್ನಡದಲ್ಲಿ 'ಸಾನೆಟ್' ರಚಿಸಿ ಅದನ್ನು 'ಚತುರ್ದಶಪದಿ' ಎಂದು ಕರೆಯುವ ಮೂಲಕ ಕನ್ನಡ ಸಾನೆಟ್ ಪ್ರಕಾರದ ಆದ್ಯ ಪ್ರವರ್ತಕರಾದರು. ಕನ್ನಡಕ್ಕೆ ಅವರು ನೀಡಿದ ವಿಶಿಷ್ಟಕಾಣಿಕೆಗಳೇ ಖಂಡಕಾವ್ಯಗಳು, "ಗೊಲ್ಗೊಥಾ' ಎಂಬುದು ಯೇಸುವಿನ ಕಡೆಯ ದಿನವನ್ನು ಚಿತ್ರಿಸಿದರೆ, 'ವೈಶಾಖಿ'ಯು ಬುದ್ಧನ ಕಡೆಯ ದಿನವನ್ನು ಚಿತ್ರಿಸುತ್ತದೆ. ಎರಡರ ವಸ್ತುವೂ ಕನ್ನಡಕ್ಕೆ ತೀರ ಹೊಸತಾದುದು. ಅವುಗಳ ಹಿರಿಮೆಯನ್ನು ಹೇಳಲು ಹೊರಟಿರುವ ಕವಿ ಯಾವ ಮತಪ್ರಚಾರಕ್ಕೂ ಕಟ್ಟುಬೀಳದೆ ಆ ಮಹಾತ್ಮರ ಸಾವು ಎಷ್ಟು ಅರ್ಥಪೂರ್ಣವಾದುದೆನ್ನುವುದನ್ನು ಸಮರ್ಥಿಸುವುದನ್ನೆ ಮುಖ್ಯ ಗುರಿಯಾಗಿ"[೩೫] ಇಟ್ಟುಕೊಂಡಿರುವುದಲ್ಲೇ ಹೊಸತನ ಎದ್ದು ಕಾಣುತ್ತದೆ. ಪೈ ಅವರ ಸರಳ ರಗಳೆಯ ಗತಿಯು ಮುಂದೆ

ಕುವೆಂಪು ಅವರ ಅವರ ಮೇಲೆ ಪ್ರಭಾವ ಬೀರಿದಂತಿದೆ.

ಗೊಲ್ಗೊಥಾದಲ್ಲಿರುವ ಸರಳತೆಯನ್ನು ಭಾಷೆ ಹಾಗೂ ಛಂದಸ್ಸಿನಲ್ಲಿ ನೋಡಬಹುದು.

"ಸಾರೆ ತಂಗಾಳಿ ಸುತ್ತಲು ತೀಡೆ, ದಿವಕಿಂದು
ದೇವಕುವರಂ ಮರಳಿ ಬಹನೆಂಬ ಗೆಲುವಿಂದ
ದೇವದೂತರೆ ಬಾರಿಸುವರೊ ಮಂಗಲವಾದ್ಯ
ವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ"[೩೬]

ಇಲ್ಲಿ ಕವಿಯ ಪಾಂಡಿತ್ಯ ಗೌಣವಾಗಿದ್ದು, ಭಾವನೆಗಳು ಹಾಗೂ ಕಲ್ಪನೆಗಳು ಮೆರೆದಿವೆ. ಅಭಿವ್ಯಕ್ತಿಯಲ್ಲಿ ಸರಳತೆ, ಸೊಬಗತೆ, ಸ್ಪಷ್ಟತೆ ಇದೆ. ಆವೇಶರಹಿತವಾದ ತಣ್ಣನೆಯ ಗಂಭೀರ, ಸಮನ್ವಯ ಮನೋಭಾವ ಕಂಡು ಬರುತ್ತದೆ. ಹೀಗೆ ಗೋವಿಂದ ಪೈ ಅವರು ಹೊಸಗನ್ನಡ ಕಾವ್ಯದ ಆರಂಭದಲ್ಲಿ ಕೈಗೊಂಡ ಕೆಲವು ದಿಟ್ಟ ನಿರ್ಧಾರಗಳು ನವೋದಯ ಕಾವ್ಯ ಸಮೃದ್ಧಿಗೆ ನೆರವಾದವು. ಪೈ ಅವರು ತಮ್ಮ ಸಮಗ್ರ ಸಾಹಿತ್ಯ ಸೇವೆ ಪರಿಗಣಿಸಿ ನೀಡಿರುವ 'ರಾಷ್ಟ್ರಕವಿ' ಪ್ರಶಸ್ತಿಗೆ ನಿಜವಾಗಿಯೂ ಭಾಜನರಾಗಿದ್ದಾರೆ.

**೧೩. ಬಿ.ಎಂ.ಶ್ರೀಕಂಠಯ್ಯ (೧೮೮೪-೧೯೪೬)**

ಹೊಸಗನ್ನಡ ಕಾವ್ಯವನ್ನು ಪುನರುಜ್ಜೀವನದ ಅರ್ಥದಲ್ಲಿ ವ್ಯಾಖ್ಯಾನಿಸಿದ ಬಿ.ಎಂ.ಶ್ರೀಯವರು ಹೊಸತನವೆಂದರೆ "ಅನುಕರಣವಲ್ಲ ಅನುಸರಣವಲ್ಲ. ಏನೋ ಒಂದು ಧೈರ್ಯದಿಂದ ಕೂಡಿದ ವಿಚಾರ, ಹೊಸ ನಿರ್ಮಾಣ, ಮರುಹುಟ್ಟು, ಆಳವಾದ ಸಮನ್ವಯ ಹಿರಿಯರು ಹೇಳಿದ ಮಾತೂ ಇರಲಿ. ನಾವೂ ವಿಚಾರ ಮಾಡೋಣ. ತಿಳಿದು ಕೊಳ್ಳೋಣ. ತಿಳಿದು ನಡೆಯೋಣ ಅನ್ನುವುದನ್ನೇ ಪುನರುಜ್ಜೀವನದ ಲಕ್ಷಣ"[೩೭] ಎಂಬ ಅಭಿಪ್ರಾಯ ಹಳೆಬೇರು ಹೊಸಚಿಗುರು ಕೂಡಿರಲು ಮರಸೊಬಗು ಎಂಬಂತೆ ಹಳತರ ತಳಹದಿಯ ಮೇಲೆ ಹೊಸತನದ ಭವ್ಯ ಸಾಹಿತ್ಯ ಸೌಧ ನಿರ್ಮಿಸಬೇಕೆಂಬುದೇ ಆಗಿದೆ. ಹಳಗನ್ನಡ ಹಾಗೂ ನಡುಗನ್ನಡ ಸಾಹಿತ್ಯವು ಸಂಸ್ಕೃತ ವಾಙ್ಮಯದ ಸತ್ವವನ್ನು ಹೀರಿಕೊಂಡು ಬೆಳೆದಂತೆ, ಇವುಗಳ ರಸವತ್ತಾದ ಭಾಗಗಳನ್ನು ಹೊಸಗನ್ನಡದಲ್ಲಿ ಜನತೆಗೆ ನೀಡಬೇಕು. ಇಂಗ್ಲಿಷ್‌ನಲ್ಲಿನ ಪ್ರಬುದ್ಧ ಕಾವ್ಯ ಪರಂಪರೆಯನ್ನು ಕನ್ನಡಕ್ಕೆ ತಂದು ಕನ್ನಡ ಕಾವ್ಯ ಕಣಜವನ್ನು ತುಂಬಬೇಕು. ಆ ಮೂಲಕ ಹೊಸ ಕಾವ್ಯಸೃಷ್ಟಿಗೆ ಹೆದ್ದಾರಿಯನ್ನು ನಿರ್ಮಿಸಬೇಕೆಂಬುದು ಬಿ.ಎಂ.ಶ್ರೀಯವರ ದೃಢಸಂಕಲ್ಪವಾಗಿತ್ತು. ಹಾಗಾಗಿ ಹೊಸತನದ ನವೋದಯ ಕಾವ್ಯ ಪರಂಪರೆಗೆ ನಾಂದಿ ಹಾಡುವ ಮೂಲಕ ಯುಗ ಪ್ರವರ್ತಕರೆನಿಸಿದರು.

ಕ್ರಿ.ಶ.೧೯೨೧ರಲ್ಲಿ ಪ್ರಕಟವಾದ ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತೆಗಳು' ಒಂದು ಯುಗ ಪ್ರವರ್ತಕ ಕೃತಿ. "ಸಾಂಪ್ರದಾಯಿಕ ದೃಷ್ಟಿಯಿಂದ ನೋಡಿದರೆ 'ಇಂಗ್ಲಿಷ್ ಗೀತೆಗಳ'ಲ್ಲಿ ಎಲ್ಲವೂ ಹೊಸದು, ಉದ್ದೇಶಪೂರ್ವಕವಾಗಿ, ಆಮೂಲಾಗ್ರವಾಗಿ ಹೊಸದು, ಭಾಷೆ ಹೊಸದು, ರೀತಿ ಹೊಸದು' ಛಂದಸ್ಸು ಹೊಸದು.................................. ಕೃತಿಯ ಪ್ರಾರಂಭದಲ್ಲೇ ಬಂದಿರುವ 'ಕಾಣಿಕೆ'ಯ ಎರಡು

ನುಡಿಗಳನ್ನು ಆಲಿಸಿ

"ಮೊದಲು ತಾಯ ಹಾಲ ಕುಡಿದು
ಲಲ್ಲೆಯಿಂದ ತೊದಲಿ ನುಡಿದು
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು
ನಲ್ಲೆಯೊಲವ ತೆರೆದು ತಂದ
ಮಾತದಾವುದು
ಸವಿಯ ಹಾಡ, ಕಥೆಯ, ಕಟ್ಟಿ
ಕಿವಿಯಲೆರೆದು ಕರುಳ ತಟ್ಟಿ,
ನಮ್ಮ ಜನರು, ತಮ್ಮ ನಾಡು
ಎನಿಸಿತಾವುದು
ನಮ್ಮ ಕವಿಗಳೆಂಬ ಕೋಡು
ತಲೆಗದಾವುದು"[೩೮]

ಕವಿಯು ಇಲ್ಲಿ ಭಾಷಾಭಿಮಾನವನ್ನು ಕಾವ್ಯಕ್ಕೆ ವಸ್ತುವನ್ನಾಗಿಸಿಕೊಂಡಿದ್ದಾರೆ. ಇಲ್ಲಿ ಬಳಸಿರುವ ಭಾಷೆಯ ಇಂಪಿನಲ್ಲಿ ಲಾಲಿತ್ಯದಲ್ಲಿ, ಬಿಗಿಯಲ್ಲಿ ಹೊಸತನವನ್ನು ಮೈಗೂಡಿಸಿಕೊಂಡಿದೆ. ಶ್ರೀಯವರನ್ನು ಹೊಸಗನ್ನಡ ಕಾವ್ಯ ಚರಿತ್ರೆಯಲ್ಲಿ ಚಿರಸ್ಥಾಯಿಯನ್ನಾಗಿಸಿರುವುದು ಅವರು ಛಂದಸ್ಸಿನಲ್ಲಿ ಹೊಸ ಹೆದ್ದಾರಿಯನ್ನು ನಿರ್ಮಿಸಿದ್ದರಿಂದ. "ಕನ್ನಡ ನುಡಿಯ ಜಾಯಮಾನಕ್ಕೆ ರಗಳೆ ಷಟ್ಪದಿಗಳ ಕಾಲದಿಂದಲೂ ಒಗ್ಗಿ ಹದವಾಗಿ ಪಳಗಿರುವ ಮಾತ್ರಗಣಗಳನ್ನೇ ಇಟ್ಟಿಗೆಯಾಗಿ ಉಪಯೋಗಿಸಿ ಚರಣ ವಿನ್ಯಾಸ ಪ್ರಾಸವಿಲಾಸಗಳನ್ನು ಮಾತ್ರ ಬಗೆಬಗೆಯಾಗಿ ಏರ್ಪಡಿಸಿ ಹೊಸ ಹೊಸ ಕಟ್ಟಡಗಳನ್ನು ಕಟ್ಟುವುದು ಸಾಧ್ಯ, ಉಚಿತ ಎಂಬುದು ಪಾಂಡಿತ್ಯದಿಂದ ಪರಿಪಕ್ವವಾದ 'ಶ್ರೀ'ಯವರ ಸ್ವತಂತ್ರ ದೃಷ್ಟಿಗೆ ಹೊಳೆಯಿತು"[೩೯] ಅವರು ಪ್ರಯೋಗಿಸಿದ ಛಂದಸ್ಸಿನ ಹೊಸ ಸಾಧ್ಯತೆಗಳು ಆಧುನಿಕ ಕನ್ನಡ ಛಂದೋ ಮಾರ್ಗಗಳನ್ನು ನಿರ್ಮಿಸಿದವು. ಅವರ ಪ್ರಭಾವವು ಗುಪ್ತಗಾಮಿನಿಯಾದ ವಾಹಿನಿಯಂತೆ, ಅನೇಕ ನವೋದಯ ಕವಿಗಳ ಉಗಮಕ್ಕೆ ಕಾರಣವಾಯಿತು. ಭಾಷೆ, ಶೈಲಿ, ವಸ್ತು ಮುಂತಾದ ಎಲ್ಲ ದೃಷ್ಟಿಕೋನಗಳಿಂದಲೂ ಹೊಸತನವು ಕಾವ್ಯದಲ್ಲಿ ಮೇಳೈಸಿ ದೇಸೀ ಮಟ್ಟುಗಳಲ್ಲಿ ಸ್ವಾನುಭವ ನಿಷ್ಠ ಭಾವಗೀತೆಗಳು ಸಮೃದ್ಧವಾಗಿ ಸೃಷ್ಟಿಯಾದವು.

ಆಂಗ್ಲ ರೊಮ್ಯಾಂಟಿಕ್ ಕವಿಗಳಾದ ವರ್ಡ್ಸ್‌ವರ್ತ್, ಷೇಕ್ಸ್‌ಪಿಯರ್, ಬರ್ನ್ಸ್, ನ್ಯಾಶ್, ಶೆಲ್ಲಿ, ಸ್ಕಾಟ್, ವೂಲ್ಫ್, ಟೆನ್ನಿಸನ್, ಕಾಪರ್, ಕ್ಯಾಂಬೆಲ್, ಥಾಮ್ಸನ್, ಬ್ರೌನಿಂಗ್, ಕೋಲ್ರಿಜ್, ಭೈರನ್,

ಮುಂತಾದವರ ಕವಿತೆಗಳನ್ನು ಕನ್ನಡಕ್ಕೆ ತಂದು

"ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ
ಅವಳ ತೊಡಿಗೆ ಇವಳಿಗಿದ್ದು
ಹಾಡ ಬಯಸಿದೆ"[೩೨]

ಎಂದು ಹಾಡಿದ್ದಾರೆ. ಆಂಗ್ಲ ಕಾವ್ಯಗಳನ್ನು ಕನ್ನಡಿಸುವಾಗ ಕನ್ನಡದ ಪರಿಸರವನ್ನು, ಕನ್ನಡದ ಹೆಸರುಗಳನ್ನು, ಕನ್ನಡದ ಜಾಯಮಾನಕ್ಕನುಗುಣವಾಗಿ ಹೊಂದಿಸಿದ್ದಾರೆ. ಪದ ಸಂಯೋಜನೆ ಹಾಗೂ ಪಾದ ಸಂಯೋಜನೆಗಳೆರಡರಲ್ಲಿಯೂ ಅನನ್ಯ ಸ್ವಂತಿಕೆಯನ್ನು ಮೆರೆದು ಸಹೃದಯನ ಕಾವ್ಯಾಸಕ್ತಿಯನ್ನು ಹಿಡಿದಿರುಸುವಲ್ಲಿ ಯಶಸ್ವಿಯಾಗಿದ್ದಾರೆ. ಸಹೃದಯನು ಮೈ ಕೊಡವಿ ಮೇಲೆದ್ದು ಕಾವ್ಯಪರಿಧಿಗೆ ಬರುವಂತೆ ಮಾಡಿದ್ದಾರೆ.

"ಆಧುನಿಕ ಕನ್ನಡ ಕಾವ್ಯಕ್ಕೆ ಜೀವಜಲವನಿತ್ತವರು ಶ್ರೀಯವರು. ಇಡೀ ಕನ್ನಡ ಕಾವ್ಯ ಜೀವನ್ಮೃತಾವಸ್ಥೆಯಲ್ಲಿದ್ದಾಗ ಅದಕ್ಕೊಂದು ಚೈತನ್ಯವನ್ನು ಕೊಟ್ಟ ಮಹನೀಯರು ಅವರು. ಆ ವೇಳೆಗೆ ನಾಡಿನಾದ್ಯಂತ ಜಾಗೃತವಾಗಿದ್ದ ನಾಡುನುಡಿಯ ಅಭಿಮಾನ ಗಮನಾರ್ಹ"[೪೧] ಆಂಗ್ಲ ಕವಿತೆಗಳು ಕನ್ನಡದಲ್ಲಿ ರೂಪು ಪಡೆದ ನಂತರ ಕನ್ನಡ ಭಾವಗೀತಾ ಪರಂಪರೆ ಸಮೃದ್ಧ ಹೊಳೆಯಾಗಿ ಹರಿಯಿತು. ಶ್ರೀಯವರು ಮತ್ತೊಂದು ದಿಟ್ಟ ಪ್ರಯೋಗಕ್ಕೆ ಕೈಹಾಕಿ ಕನ್ನಡದ ಜಾಯಮಾನಕ್ಕೆ ಹೊಸದೆನಿಸುವ, ಇದುವರೆಗೂ ಅಸ್ಪೃಶ್ಯವೆನಿಸಿದ್ದ ರುದ್ರನಾಟಕವೊಂದನ್ನು ರಚಿಸಿದರು. ಸಾಹಿತ್ಯ ಲೋಕದಲ್ಲಿ ಕೋಲಾಹಲಕ್ಕೆ ಇದು ಕಾರಣವಾಯಿತು. ಇಂಗ್ಲಿಷ್ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿದ್ದ ಶ್ರೀಯವರು ಗ್ರೀಕ್ ರುದ್ರನಾಟಕ 'ಎಜಾಕ್ಸ್'ಅನ್ನು ಭಾರತೀಯ ಜಾಯಮಾನಕ್ಕೆ ಹೊಂದುವಂತೆ ಮಹಾಭಾರತದಲ್ಲಿನ ಎಳೆಯೊಂದನ್ನಿಟ್ಟುಕೊಂಡು 'ಅಶ್ವತ್ಥಾಮನ್' ಎಂಬ ಶೀರ್ಷಿಕೆಯಡಿಯಲ್ಲಿ ರಚಿಸಿದರು.

ಪರಂಪರೆಯಲ್ಲಿ ಚಿರಂಜೀವಿಯಾಗಿದ್ದ ಅಶ್ವತ್ಥಾಮನನ್ನು ಆತ್ಮಹತ್ಯೆಗೆ ಶರಣು ಮಾಡಿದ್ದು ಸಂಪ್ರದಾಯಸ್ಥರ ಕಣ್ಣನ್ನು ಕೆಂಪಾಗಿಸಿತು. ಗೀತ ಪ್ರಕಾರದ ಭಾಷೆಯನ್ನು ಅಳವಡಿಸಿ ಸರಳರಗಳೆ ಛಂದಸ್ಸಿನಲ್ಲಿ ನಾಟಕವನ್ನು ರಚಿಸುವ ಮೂಲಕ ಕನ್ನಡ ನಾಟಕ ಪ್ರಪಂಚದಲ್ಲಿ ಹೊಸ ಶಕೆಯೊಂದನ್ನು ನಿರ್ಮಿಸಿದರು. ಈ ನಾಟಕದಲ್ಲಿ ಬಳಸಿರುವ ಭಾಷೆಯು ಸಂಸ್ಕೃತ ಭೂಯಿಷ್ಠತೆಯೆನಿಸಿದರೂ ಕನ್ನಡಕ್ಕೆ ಹೊಸತಾದುದು.

"ಓವೋ ಕನ್ನಡದ ನಾಡೇ
ಮುನ್ನೀರ್ ಮೊವಿಂಗು ಕರೆನಾಡೇ
ಮಲೆನಾಡೆ ಪೊನಲ್‌ನಾಡೆ ಬಯಲ ಪೊನ್‌ನಾಡೇ
ಪಲಕಾಲಮ್ ಆನ್ ಅಗಲ್ದಿರ್ದೆನ್

ಅಲ್ಲಿ ಕಣ್ಮುಚ್ಚಲೆಂದಿರ್ದ್ಪೆನ್

ಇಲ್ಲಮೆನಗಾ ಪುಣ್ಯಂ, ಓ ಚೆಲ್ವು ನಾಡೇ"[೪೨]

ಅಶ್ವತ್ಥಾಮನ ಪಾತ್ರಕ್ಕೆ ಸರಿಹೊಂದುವ ಭಾಷೆಯೊಂದನ್ನು ಶ್ರೀಯವರು ರೂಪಿಸಿದ್ದಾರೆ ಎಂದೆನಿಸಿದರೂ ದೇಸೀಯತೆ ಭಾಷೆಯಲ್ಲಿ ಗಟ್ಟಿಯಾಗಿದೆ. ಹಳಗನ್ನಡದ ವ್ಯಂಜನಾಂತ ಪದಗಳು ಪ್ರಾಶಸ್ತ್ಯ ಪಡೆದಿವೆ. ಶ್ರೀಯವರ ಕಾವ್ಯವಾಗಲಿ, ನಾಟಕವಾಗಲೀ, ಭಾಷಣವಾಗಲಿ ಅಲ್ಲೆಲ್ಲಾ ಕನ್ನಡ ನಾಡು, ನುಡಿಗಾಗಿ, ಪ್ರಕೃತಿ ಸೊಬಗಿಗಾಗಿ ಹೃದಯ ಮಿಡಿದಿದೆ. ಇವರು ಬಳಸಿದ ಸರಳ ರಗಳೆಯು ಕುವೆಂಪು ಅವರ ಮಹಾಕಾವ್ಯಕ್ಕೆ ಪ್ರೇರಣೆಯಾಯಿತು. ಪಾಶ್ಚಾತ್ಯ ಛಂದೋ ಪ್ರಾಕಾರಗಳನ್ನು ಕನ್ನಡಕ್ಕೆ ತಂದು ಅವುಗಳಿಗೆ ಕನ್ನಡದ ಹೆಸರಿನ್ನಿಟ್ಟ ಕೀರ್ತಿ ಶ್ರೀಯವರದು ಆಧುನಿಕ ಕಾವ್ಯಲೋಕಕ್ಕೆ ಸನ್ಮಾರ್ಗ ತೋರಿಸಿದ ಶ್ರೀಯವರು. 'ಕನ್ನಡದ ಕಣ್ವ', 'ಆಚಾರ್ಯಪುರಷ', 'ನಾಡೋಜ', 'ಯುಗ ಪ್ರವರ್ತಕ' ಮುಂತಾದ ಅನ್ವರ್ಥಕಗಳಿಗೆ ಭಾಜನರಾಗಿದ್ದಾರೆ.

**೧೪. ಕಾವ್ಯಾನಂದ ಪುಣೇಕರ (೧೮೭೦-೧೯೨೯)**

ಹೊಸಗನ್ನಡ ಕಾವ್ಯದ ಆರಂಭಕಾಲದಲ್ಲಿ ಹುಲುಸಾಗಿ ಕಾವ್ಯರಚನೆ ಮಾಡಿ ಅಗೋಚರವಾಗಿಯೇ ಉಳಿದುಬಿಟ್ಟ ಪ್ರತಿಭೆ ನರಸಿಂಹಾಚಾರ್ಯ ಭೀಮಾಚಾರ್ಯ ಕಿತ್ತೂರ. ಇವರು ತಮ್ಮ ಕಾಯದ ಮೂಲಕ ಕಾವ್ಯಾನಂದ ಪುಣೇಕರ ಎಂದು ನಾಮಾಂಕಿತರಾಗಿದ್ದಾರೆ. ಹಳೆಯ ಛಂದಸ್ಸನ್ನೆ ಕಾವ್ಯದಲ್ಲಿ ಅಳವಡಿಸಿದ್ದರೂ ಲಯ, ಬಂಧಗಳಲ್ಲಿ ಹೊಸತನದ ಅಲೆ ದಟ್ಟವಾಗಿದೆ. ಅವರ ಕಾವ್ಯಗಳಲ್ಲಿ ರಾಷ್ಟ್ರಾಭಿಮಾನ, ನವೀನ ಪ್ರಜ್ಞೆಗಳು, ಚುರುಕುತ ಚಾಟೂಕ್ತಿಗಳು, ಲಲಿತ ಶೈಲಿ ಮುಂತಾದವು ಓದುಗನ ಕಣ್ಮುಂದೆ ಎಳೆಎಳೆಯಾಗಿ ಬಿಚ್ಚಿಕೊಳ್ಳುತ್ತವೆ.

"ಒಂದೆ ಭಾವದಿಂದ ನಮಿಸಿ ಹಿಂದುಮಾತೆಗೆ

ಇಂದು ಮಂದಭಾಗ್ಯ ದೇಶಬಂಧ ಜನಗಳೇ

ಸ್ಕಂದ ಸಹಸ್ರಬಂಧ ಜರಾಸಂಧರಾ

ಕೊಂದ ಪರಶುರಾಮ ರಾಮಭೀಮ ಸುಂದರಿ

ದ್ರೋಣ ಭೀಷ್ಮ ಬಾಣ ಸಂಧಾನ ಸಾಕ್ಷಿಯೇ

ಕ್ಷೋಣಿ ಶಾಣ ಭೂತೆಯಾರ್ಯ ಕಾರ್ಯ ಸ್ವರ್ಣಕೆ

.......

ಮಾತೆ ಮಾತೆ ಮಾತೆ ಅನ್ನವಸ್ತ್ರಧಾತೆಯೇ

ಭೂತಧಾತ್ರಿ ಎಂದು ಬಂಧ ಮುಕ್ತಿ ಬೇಡಿರಿ"[೪೩]

ಈ ಪದ್ಯದಲ್ಲಿ ಕವಿಯ ನಾಡಪ್ರೇಮವು ವ್ಯಕ್ತವಾಗುತ್ತದೆ. ಇಲ್ಲಿ ಆದಿಪ್ರಾಸವನ್ನು ಪಕ್ಕಕ್ಕಿಟ್ಟು

ಕಾವ್ಯದ ಒಟ್ಟು ನೋಟವನ್ನು ಗ್ರಹಿಸಿದಾಗ ಒಂದು ಉತ್ತಮ ದೇಶಪ್ರೇಮಗೀತೆಯು ಹೊಸಗನ್ನಡದ ಸ್ವರೂಪದಲ್ಲಿ ಸಿಗುತ್ತದೆ.

ಪುಣೇಕರರು ಕಾವ್ಯರಚನೆಯಲ್ಲಿ ಪ್ರಾಚೀನ ಛಂದೋ ಪ್ರಕಾರಗಳಾದ ಸಮಪಾದ, ವೃತ್ತ, ಷಟ್ಪದಿಗಳನ್ನೇ ಅಧಿಕವಾಗಿ ಬಳಸಿಕೊಂಡಿದ್ದಾರೆ. ತಮ್ಮ ಸಮಕಾಲೀನ ಸಾಮಾಜಿಕ ಸಮಸ್ಯೆಗಳನ್ನು ಕಾವ್ಯ ವಸ್ತುವನ್ನಾಗಿಸಿಕೊಳ್ಳುವ ಮೂಲಕ ಹೊಸತನವನ್ನು ಮೆರೆಯುತ್ತಾರೆ. ವಿಧವೆ, ಬಡತನ, ಶೋಷಣೆ, ಮೂಢನಂಬಿಕೆಗಳೂ ಅವರ ಕಾವ್ಯದಲ್ಲಿ ಸ್ಥಾನ ಪಡೆದು ಜನತೆಯನ್ನು ಸರಿದಾರಿಯತ್ತ ಸಾಗಲು ಚಿಂತಿಸುವ ಅಗತ್ಯತೆಯನ್ನು ಒತ್ತಿ ಹೇಳಿವೆ. ಕಥನಕಲೆಯಲ್ಲಿ ನಿಪುಣರಾಗಿದ್ದ ಪುಣೇಕರರು ಕಥನಕಾವ್ಯಗಳನ್ನು ಕುಸುರಿಕಲೆಯಂತೆ ಚಿತ್ರಿಸುತ್ತಾರೆ. ಇವರ ಹಲವು ಬಿಡಿಗವನಗಳು ಸಮಾಜದ ಸ್ಥಿತಿಗತಿಯ ಬಗ್ಗೆ ಬೆಳಕು ಚೆಲ್ಲುವಂತಿವೆ.

**ಇತರ ಪ್ರಮುಖರು**

ನವೋದಯ ಕಾಲದ ಮೇರು ಕವಿಗಳೆಲ್ಲರೂ ಸಾಹಿತ್ಯಕ್ಷೇತ್ರಕ್ಕೆ ಅಡಿಯಿಡುತ್ತಿದ್ದ ಕಾಲದಲ್ಲಿ ಹಲವು ಕವಿತೆಗಳನ್ನು ರಚಿಸಿದ್ದಾರೆ. ಹೊಸಗನ್ನಡ ಕಾವ್ಯದ ಆರಂಭಕವಿಗಳ ಕಾವ್ಯಸಾರವನ್ನು ಸವಿದು ಅಲ್ಲಿನ ಒಳಿತು-ಕೆಡುಕುಗಳನ್ನು ಪರಾಮರ್ಶಿಸಿ ಸರಿಕಾಣದ ಅಂಶಗಳನ್ನು ಹಿಂದೆ ಸರಿಸಿ ಹೊಸಯುಗಕ್ಕೆ ಅಗತ್ಯವೆನಿಸುವ ಅಂಶಗಳನ್ನು ಮೈಗೂಡಿಸಿಕೊಂಡು ಅಂದಿನ ಹಲವು ಯುವ ಚೇತನಗಳು ಕಾವ್ಯಕೃಷಿ ಮಾಡಿವೆ.

**ಪಂಡಿತ ಮುಳಿಯ ತಿಮ್ಮಪ್ಪಯ್ಯ**

ತಿಮ್ಮಪ್ಪಯ್ಯನವರು ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷೆಗಳನ್ನು ಅಧ್ಯಯನ ಮಾಡಿ ಸಮನ್ವಯಗೊಳಿಸಿಕೊಂಡು ಕಾವ್ಯ ಕಟ್ಟಿದರು. ಭಾಷೆಯ ಬಂಧುರತೆಗಾಗಿ, ಪರಿಶುದ್ಧತೆಗಾಗಿ ಶ್ರಮಿಸಿದರು ಕನ್ನಡ ಕಾವ್ಯಭಾಷೆ, ವಸ್ತು, ಛಂದೋನಿಯಮಗಳು ಹೊಸತನಕ್ಕೆ ಹೊಂದಿಕೊಂಡು ಉಜ್ವಲಕಾವ್ಯ ನಿರ್ಮಾಣವಾಗಬೇಕೆಂಬ ಹೆಬ್ಬಯಕೆ ಅವರದು. 'ಶ್ರೀ'ಯವರ 'ಇಂಗ್ಲಿಷ್ ಗೀತೆಗಳು' ಕೃತಿ ಪ್ರಕಟಗೊಳ್ಳುವ ಮೊದಲೇ 'ಸೊಬಗಿನ ಬಳ್ಳಿ', 'ಪ್ರೇಮಸಾರ', 'ಬಡಹುಡುಗಿ' ಎಂಬ ಕಾವ್ಯಗಳನ್ನು ಪ್ರಕಟಿಸಿದ್ದರೆಂಬುದು ಗಮನಾರ್ಹ. ಹಲವು ನಾಟಕಗಳನ್ನೂ ರಚಿಸಿದ್ದರು. ಅವರ ಕವಿತೆಗಳಲ್ಲಿ 'ಬಡಹುಡುಗಿ', 'ಪ್ರೇಮಪಾಶ' ಎಂಬಿವೆರಡೂ ಕಥನ ಕವನಗಳು.

ತಿಮ್ಮಪ್ಪಯ್ಯನವರಿಗೆ ಅಚ್ಚಗನ್ನಡ ಭಾಷಾ ಪ್ರಯೋಗದ ಹುಚ್ಚು. ಅಂಡಯ್ಯನ 'ಕಬ್ಬಿಗರ ಕಾವಂ' ಕೃತಿಯಿಂದ ಪ್ರಭಾವಿತರಾಗಿ 'ಸೊಬಗಿನಬಳ್ಳಿ' ಎಂಬ ಕಾವ್ಯವನ್ನು ಸಂಸ್ಕೃತದ ಋಣವಿಲ್ಲದೆ ಅಚ್ಚಗನ್ನಡದಲ್ಲಿ ರಚಿಸಲು ಪ್ರಯತ್ನಿಸಿದ್ದಾರೆ. ದೇಸೀಯ ಭಾಷಿಕ ಸಂಪತ್ತುಗಳಾದ ಗಾದೆಗಳು, ನುಡಿಗಟ್ಟುಗಳು, ನಾಣ್ಣುಡಿಗಳು ಅವರ ಕಾವ್ಯಗಳಲ್ಲಿ ಅಧಿಕವಾಗಿ ಬಳಕೆಯಾಗಿರುವುದೇ ಅವರ ಕನ್ನಡ ಪ್ರೀತಿಗೆ ಹಿಡಿದ ಕನ್ನಡಿ.

**ಕಡೆಂಗೋಡ್ಲು ಶಂಕರಭಟ್ಟ**

ನಿಸರ್ಗಪ್ರೇಮಿಯಾಗಿದ್ದ ಶಂಕರಭಟ್ಟರು ಕರಾವಳಿಯ ಪ್ರಕೃತಿ ಸೌಂದರ್ಯ, ಜೀವನ ವಿಧಾನವನ್ನು ಅನುಭವಿಸಿ ಕಾವ್ಯರಚನೆ ಮಾಡಿದ್ದಾರೆ. ಉತ್ಕೃಷ್ಟ ಕಾವ್ಯರಚನೆಯು ಅವರನ್ನು ಚಿರಸ್ಥಾಯಿಯನ್ನಾಗಿಸಿದೆ. "ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಡೆಂಗೋಡ್ಲು ಬರೆದರೂ ಅದರ ಹೆಸರು ದಾಖಲಾದುದು ಕವಿಯೆಂದೆ. ಅದರಲ್ಲೂ ಕನ್ನಡದ ಅತ್ಯಂತ ಮಹತ್ವದ ಕಥನ ಕವಿತೆ ಕಟ್ಟಿದರೆಂದೇ ಅವರು ಖ್ಯಾತರಾದರು"೪೪ ಎಂಬುದು ಎ.ವಿ.ನಾವಡರ ಅಭಿಪ್ರಾಯ ಹೊಸಗನ್ನಡ ಕಾವ್ಯದ ಆರಂಭದಲ್ಲಿ ಅಂದರೆ ನವೋದಯ ಪೂರ್ವದಲ್ಲಿಯೇ ಶಂಕರಭಟ್ಟರ 'ಘೋಷಯಾತ್ರೆ', 'ಗಾಂಧಿಸಂದೇಶ', 'ವಸ್ತ್ರಾಪಹರಣ' ಎಂಬ ಮೂರು ಕವನಸಂಕಲನಗಳು ಪ್ರಕಟಗೊಂಡಿದ್ದವು.

'ವಸ್ತ್ರಾಪಹರಣ' ಕವನವು ಗಾಂಧಿಯವರ ಖಾದಿ ಕ್ರಾಂತಿಯನ್ನು ಸ್ವದೇಶಿ ಚಳವಳಿಯನ್ನು ಪುರಾಣವಸ್ತುವಿನೊಡನೆ ಸಮೀಕರಿಸಿರುವುದು ಶಂಕರಭಟ್ಟರ ಕಾವ್ಯಕಲೆಗೆ ಪ್ರತ್ಯಕ್ಷ ಸಾಕ್ಷಿ.

"ಪರಮಮೋಹನ ಕೃಷ್ಣನೆಸಗುವ
ನುರುತರದ ಕಾರ್ಯಗಳ ನೀಕ್ಷಿಸು
ಪಿರಿದೆನಿಪ ಚಕ್ರದಲಿ ಮಾಡಿದ ವಸ್ತ್ರರಾಶಿಯನು
ತರುಣಿಯನು ಕುನಿಸಿದರು ಮಾನವ
ಮುರಿಯಲಾರನು ಪಿಂಗಲೋಚನ
ನರಿತೆಯಾ ಸತ್ಯಾಗ್ರಹದ ಮಹಿಮೆಗಳನೆಲೆ ಭೀಮ"೪೫

ಈ ಪದ್ಯವು ಪ್ರಾಚೀನ ಛಂದೋಪ್ರಕಾರವಾದ ಷಟ್ಪದಿಯಲ್ಲಿ ರಚನೆಯಾಗಿದ್ದು ಪ್ರಾಚೀನ ವಸ್ತುವನ್ನು ಸಮಕಾಲೀನ ಸನ್ನಿವೇಶಕ್ಕೆ ಸಮೀಕರಿಸಿರುವುದು ಕಂಡು ಬರುತ್ತದೆ. ಅವರ 'ಗಾಂಧಿ ಸಂದೇಶ' ಕವನವು ಸಾಂಪ್ರದಾಯಕ ಕಾವ್ಯಗಳ ಮಾದರಿ ವಾರ್ಧಕ ಷಟ್ಪದಿಯಲ್ಲಿ ರಚನೆಯಾಗಿದೆ. ಛಂದೋಪ್ರಕಾರ ಹಾಗೂ ಕಾವ್ಯಭಾಷೆ ಹಳತೆನಿಸಿದರೂ ವಸ್ತುವಿನ ಆಯ್ಕೆಯಲ್ಲಿ ಕವಿಯು ಪರಂಪರೆಯಿಂದ ಬಿಡುಗಡೆ ಹೊಂದಿದ್ದಾರೆ. ಸ್ವಾತಂತ್ರ್ಯ ಚಳುವಳಿಯ ದಟ್ಟಪ್ರಭಾವ ಸಮಕಾಲೀನ ಸಾಹಿತಿಗಳ ಮೇಲೆ ಆಗಿತ್ತೆಂಬುದಕ್ಕೆ ಇದು ಉತ್ತಮ ಉದಾಹರಣೆ.

ಡಿ.ವಿ.ಗುಂಡಪ್ಪನವರ ಹೆಸರು ಇಂದಿಗೂ ಕನ್ನಡಿಗರ ನಾಲಗೆಯ ಮೇಲೆ ನಲಿದಾಡುತ್ತಿದೆ. ಅವರ 'ಮಂಕುತಿಮ್ಮನ ಕಗ್ಗ' ಎಂಬ ದಾರ್ಶನಿಕ ಕೃತಿಯ ಅತ್ಯಂತ ಮಹತ್ವಪೂರ್ಣವಾದುದು. ನವೋದಯ ಕಾವ್ಯದ ಮೊದಲಲ್ಲಿಯೇ ಗುಂಡಪ್ಪನವರ 'ವಸಂತಕುಸುಮಾಂಜಲಿ' ಹಾಗೂ 'ನಿವೇದನ' ಎಂಬ ಎರಡು ಕವನಸಂಕಲನಗಳು ಪ್ರಕಟಗೊಂಡಿದ್ದವು. ೧೯೧೮ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಎ.ಆರ್.ಕೃ ಅವರ ನೇತೃತ್ವದಲ್ಲಿ ಕರ್ನಾಟಕ ಸಂಘ ಸ್ಥಾಪನೆಯಾಯಿತು. ಶ್ರೀ ಅವರ 'ಇಂಗ್ಲಿಷ್ ಗೀತೆಗಳು'

ಪ್ರಕಟಗೊಂಡ ಸಂದರ್ಭದಲ್ಲಿಯೇ ಟಿ.ಎಸ್.ವೆಂಕಣ್ಣಯ್ಯನವರು ಸಂಘದ ಆಶ್ರಯದಲ್ಲಿ ವಿದ್ಯಾರ್ಥಿ ಕವಿಗಳ ಕಾವ್ಯವಾಚನಕ್ಕೆ ಅವಕಾಶ ಕಲ್ಪಿಸಿದರು. ಕಾರ್ಯಕ್ರಮದಲ್ಲಿ ವಾಚನವಾದ ಆಯ್ದ ಕವನಗಳನ್ನು ಸಂಗ್ರಹಿಸಿ 'ಕಿರಿಯ ಕಾಣಿಕೆ' ಹಾಗೂ 'ತಳಿರು' ಎಂಬ ಎರಡು ಕವನ ಸಂಕಲನಗಳನ್ನು ಪ್ರಕಟಿಸಿದರು. ಈ ಸಂಕಲನಗಳಲ್ಲಿ ಪು.ತಿ.ನ. ರಾಜರತ್ನಂ, ಕುವೆಂಪು, ತೀನಂಶ್ರೀ ದಿನಕರ ದೇಸಾಯಿ, ಎಂ.ವಿ.ಸೀತಾರಾಮಯ್ಯ ಮುಂತಾದವರ ಕವನಗಳು ಸೇರಿದ್ದವು ಎಂಬುದು ಗಮನಾರ್ಹ ವಿಷಯ.

ಹೊಸಗನ್ನಡ ಸಾಹಿತ್ಯದ ಆರಂಭವು ಕ್ರೈಸ್ತಗೀತೆಗಳ ಅನುವಾದ, ರಂಗಭೂಮಿಯ ನಾಟಕಗಳ ರಚನೆ, ಕಾದಂಬರಿಗಳ ಭಾಷಾಂತರ, ಸಾಹಿತ್ಯ ಚರಿತ್ರೆ, ಕನ್ನಡ ನಾಡಿನ ಸಾಂಸ್ಕೃತಿಕ ಹಿರಿಮೆ, ಸಂಸ್ಕೃತಿ ಸಮೀಕ್ಷೆ, ಆಂಗ್ಲ ಕವಿತೆಗಳ ಅನುವಾದ ಮುಂತಾದವುಗಳನ್ನು ಆಶ್ರಯಿಸಿತ್ತು. ಕಾವ್ಯವು ಪರಂಪರೆಯ ಪರದೆಯಿಂದ ಬಿಡುಗಡೆ ಹೊಂದುವ ಎಲ್ಲ ಲಕ್ಷಣಗಳನ್ನು ಒಳಗೊಂಡಿತ್ತು. ದೇಶದಲ್ಲಿನ ಸ್ವಾತಂತ್ರ್ಯ ಚಳವಳಿಯ ಕಾವು, ಗಾಂಧೀವಾದ, ಕರ್ನಾಟಕದ ಏಕೀಕರಣ, ಗಾಂಧೀವಾದ, ಕರ್ನಾಟಕದ ಏಕೀಕರಣ, ಭಾರತೀಯ ಭಾಷೆ ಹಾಗೂ ಸಂಸ್ಕೃತಿಗಳ ಪುನರುತ್ಥಾನ, ಸುಧಾರಣಾವಾದ, ಐರ್ಯೋಪ್ಯ ವಿಚಾರ ಧಾರೆಗಳ ಸಂಪರ್ಕದಿಂದಾಗಿ ಸ್ವಾತಂತ್ರ್ಯ, ಸಮಾನತೆಗಳಿಗಾಗಿ ಹಕ್ಕೊತ್ತಾಯ, ಅಬ್ಬರದ ರಾಷ್ಟ್ರೀಯ ಪ್ರಜ್ಞೆ ಬೆಳವಣಿಗೆ, ಇಂಗ್ಲಿಷ್ ರಮ್ಯ ಪರಂಪರೆಯ ಪ್ರಭಾವ ಮುಂತಾದ ಅಂಶಗಳು ಹೊಸಗನ್ನಡದ ಕವಿತೆಯ ಮೇಲೆ ಪ್ರಭಾವ ಬೀರಿದವು. ಇದೆಲ್ಲದರ ಸಾರವನ್ನು ಹೀರಿಕೊಂಡ ಕನ್ನಡದ ಕವಿಗಳು ಹೊಸ ಬಗೆಯ ಅಭಿವ್ಯಕ್ತಿಗಾಗಿ ಹಾತೊರೆದು ಭಾಷೆ, ವಸ್ತು, ಶೈಲಿ, ಪ್ರಕಾರಗಳಲ್ಲಿ ಹೊಸತನವನ್ನು ಅಳವಡಿಸಿಕೊಂಡರು. ಕಾವ್ಯವು ಸಮೃದ್ಧವಾಗಿ ಬೆಳೆಯಲು ಹಾದಿ ಸುಗಮವಾಯಿತು.

ಪರಂಪರಾಗತ ಛಂದೋಪ್ರಕಾರಗಳನ್ನು ಕೈಬಿಟ್ಟು, ಪ್ರಾಸಪದ್ಧತಿಗೆ ವಿದಾಯ ಹೇಳಿ ಹೊಸ ಬಗೆಯ ಕಾವ್ಯಗಳನ್ನು ಸೃಷ್ಟಿಸಲಾಯಿತು. ಭಾವಗೀತೆ, ಸಾನೆಟ್, ಪ್ರಗಾಥ, ಸರಳರಗಳೆ, ಕಥನ ಕವನಗಳು, ಶಿಶುಗೀತೆಗಳು, ಪ್ರಕೃತಿಗೀತೆಗಳು, ಮಹಾಕಾವ್ಯಗಳು, ಕಾವ್ಯಖಂಡಗಳು, ವಿಡಂಬನಗೀತೆಗಳು ನವೋದಯ ಕಾಲದಲ್ಲಿ ರಚನೆಯಾದವು. ಮುಂದೆ ಮಾಸ್ತಿ, ಬೇಂದ್ರೆ, ಕುವೆಂಪು, ಪು.ತಿ.ನ, ವೀ.ಸೀತಾರಾಮಯ್ಯ., ತೀ.ನಂ.ಶ್ರೀ., ವಿ.ಕೃ.ಗೋಕಾಕ್, ಕೆ.ಎಸ್.ನರಸಿಂಹಸ್ವಾಮಿ, ಮುಂತಾದ ಮೇರುಶಿಖರಗಳ ಉಗಮಕ್ಕೆ ಹೊಸಗನ್ನಡ ಕಾವ್ಯದ ಆರಂಭಕಾಲದ ಕವಿಗಳು ಭೂಮಿಕೆಯನ್ನು ನಿರ್ಮಿಸಿಕೊಟ್ಟರು ವಿವಿಧ ಮೂಲಗಳಿಂದ ಹರಿದು ಬರುವ ಹಳ್ಳ, ತೊರೆ, ನದಿಗಳು ಸಮುದ್ರವನ್ನು ಸಮೃದ್ಧಿಗೊಳಿಸುವಂತೆ ಕನ್ನಡ ಕಾವ್ಯದ ಆರಂಭವು ವಿವಿಧ ಪ್ರಕಾರ, ವಿವಿಧ ಕವಿಗಳಿಂದ ರಚನೆಯಾಗಿದ್ದರೂ ಕನ್ನಡ ಕಾವ್ಯ ಭಂಡಾರವನ್ನು ತುಂಬಿ ಸಮೃದ್ಧಿಗೊಳಿಸಿದೆ.



## ಅಡಿಟಿಪ್ಪಣಿ

೧.ಡಾ.ಎಡ್ವರ್ಡ್ ನರೋನಾ ಅವರ ಮಹಾಪ್ರಬಂಧ ಕನ್ನಡ ಧಾರ್ಮಿಕ ಸಾಹಿತ್ಯಕ ಕ್ರೈಸ್ತ ವಿಷಯಗಳ ಕೊಡುಗೆ ಎಂಬುದರ ಬೆನ್ನುಡಿಯಿಂದಯ

೨. ಶ್ರೀನಿವಾಸ ಹಾದನೂರ, ಹೊಸಗನ್ನಡದ ಅರುಣೋದಯ, ಪುಟ ೧೮೩.

೩. ಆರ್. ನರಸಿಂಹಾಚಾರ್, ಕರ್ಣಾಟಕ ಕವಿಚರಿತೆ, ಸಂಪುಟ-೩, ಪುಟ ೧೯೬.

೪. ಶ್ರೀನಿವಾಸ ಹಾವನೂರ, ಹೊಸಗನ್ನಡದ ಅರುಣೋದಯ, ಪುಟ ೨೯೫.

೫. ತ.ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ ೨೨೦.

೬. ಪ್ರೊ.ಎಸ್.ಅನಂತನಾರಾಯಣ, ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ಪುಟ ೧೨.

೭. ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಪುಟ ೧೫.

೭. ಅದೇ, ಪುಟ ೧೪.

೮. ಆರ್. ನರಸಿಂಹಾಚಾರ್, ಕರ್ಣಾಟಕ ಕವಿಚರಿತೆ, ಸಂಪುಟ-೩, ಪುಟ ೨೨೦.

೯. ಸಂ.ಗಿರಡ್ಡಿ ಗೋವಿಂದರಾಜ, ಕನ್ನಡ ನವೋದಯ ಕಾವ್ಯ-ಮಂಗಳೂರು ಕೇಂದ್ರ, ಲೇಖಕ -ಬೈರಮಂಗಲ ರಾಮೇಗೌಡ, ಮುದ್ದಣ ಮತ್ತು ಕನ್ನಡ ನವೋದಯ ಕಾವ್ಯ, ಪುಟ ೧.

೧೦. ಡಾ.ದೊಡ್ಡರಂಗೇಗೌಡ, ಕನ್ನಡ ನವೋದಯ ಕಾವ್ಯ, ಪುಟ ೩೩.

೧೧. ಅದೇ, ಪುಟ ೫೦.

೧೨. ಅದೇ, ಪುಟ ೫೧.

೧೩. ಸಂ.ಜಿ.ಎಸ್.ಸಿದ್ದಲಿಂಗಯ್ಯ ಮತ್ತು ಎಂ.ಎಚ್‌ಕೃಷ್ಣಯ್ಯ, ಸಾಲು ದೀಪಗಳು, ಲೇಖಕ ಡಾ.ಸಿ.ಯುಮಂಜುನಾಥ್, ಇ.ಪಿ.ರೈಸ್.

೧೪. ಡಾ.ದೊಡ್ಡರಂಗೇಗೌಡ, ಕನ್ನಡ ನವೋದಯ ಕಾವ್ಯ, ಪುಟ ೬೦.

೧೫. ಅದೇ, ಪುಟ ೬೨.

೧೬. ಅದೇ, ಪುಟ ೬೨.

೧೭. ಅದೇ, ಪುಟ ೫೯.

೧೮. ಸಂ.ಜಿ.ಎಸ್.ಸಿದ್ದಲಿಂಗಯ್ಯ ಮತ್ತು ಎಂ.ಎಚ್‌ಕೃಷ್ಣಯ್ಯ, ಸಾಲು ದೀಪಗಳು, ಲೇಖಕ, 'ಶಾಂತಕವಿ', ವಿ,ಗುಂಡಣ್ಣ, ಪುಟ ೨೧.

೧೯. ಅದೇ, ಪುಟ ೨೫.

೨೦. ಡಾ.ದೊಡ್ಡರಂಗೇಗೌಡ, ಕನ್ನಡ ನವೋದಯ ಕಾವ್ಯ, ಪುಟ-೫೯.

೨೧. ಪ್ರೊ.ಎಸ್.ಅನಂತನಾರಾಯಣ.,ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ಪುಟ ೬೬.

೨೨. ಸಂ.ಗಿರಡ್ಡಿ ಗೋವಿಂದರಾಜ, ಕನ್ನಡ ನವೋದಯ ಕಾವ್ಯ; ಮಂಗಳೂರು ಕೇಂದ್ರ, ಲೇ, ವಿ.ಎನ್.ಹೆಗಡೆ, ಹಟ್ಟಿಯಂಗಡಿ ನಾರಾಣಯರ ಆಂಗ್ಲಕವಿತಾವಳಿ, ಪುಟ ೩೪.

೨೩. ಅದೇ, ಪುಟ ೨೪.

೨೪. ಡಾ.ದೊಡ್ಡರಂಗೇಗೌಡ, ಕನ್ನಡ ನವೋದಯ ಕಾವ್ಯ, ಪುಟ ೭೯.

೨೫. ಡಾ.ಪ್ರಭುಶಂಕರ, ಕನ್ನಡದಲ್ಲಿ ಭಾವಗೀತೆ, ಪುಟ ೨೭.

೨೬. ಡಾ.ವರದಾಶ್ರೀನಿವಾಸ, ಪಂಜೆ ಮಂಗೇಶರಾಯರ ಕೃತಿಗಳು, ಒಂದು ಅಧ್ಯಯನ, ಪುಟ ೧೪೩.

೨೭. ಅದೇ, ಪುಟ ೧೬೦.

೨೮. ಅದೇ, ಪುಟ ೨೦೨.

೨೯. ಸಂ.ಜಿ.ಎಸ್.ಸಿದ್ದಲಿಂಗಯ್ಯ ಮತ್ತು ಎಂ.ಎಚ್‌ಕೃಷ್ಣಯ್ಯ, ಸಾಲು ದೀಪಗಳು, ಲೇಖಕ ಎಂ.ರಮಚಂದ್ರ, ಪಂಜೆಮಗೇಶರಾವ್, ಪುಟ ೪೨.

೩೦ ಎಂ.ಗೋವಿಂದ ಪೈ., ಗಿಳಿವಿಂಡು, ಪುಟ ೬೮.

೩೧. ಜಿ.ಎಸ್.ಸಿದ್ದಲಿಂಗಯ್ಯ, ಹೊಸಗನ್ನಡ ಕಾವ್ಯ, ಪುಟ ೨೫.

೩೨. ಸಂ.ಗಿರಡ್ಡಿ ಗೋವಿಂದರಾಜ, ಕನ್ನಡ ನವೋದಯ ಕಾವ್ಯ, ಮಂಗಳೂರು ಕೇಂದ್ರ; ಲೇ ಕುಮಾರ ಚಲ್ಯ, ಗೋವಿಂದ ಪೈ ಅವರ ಕಾವ್ಯ, ಪುಟ ೪೫.

೩೩. ಅದೇ, ಪುಟ ೪೫.

೩೪. ಗೋವಿಂದ ಪೈ, ಗೊಲ್ಗೊಥಾ ಮತ್ತು ವೈಶಾಖಿ, ಪುಟ ೫.

೩೫. ಅದೇ, ಪುಟ ೩೫.

೩೬. ಸಂ.ಗಿರಡ್ಡಿ ಗೋವಿಂದರಾಜ, ಕನ್ನಡ ನವೋದಯ ಕಾವ್ಯ; ಮಂಗಳೂರು ಕೇಂದ್ರ, ಲೇಖಕ ಬೈರಮಂಗಲ ರಾಮೇಗೌಡ, ಮುದ್ರಣ ಮತ್ತು ಕನ್ನಡ ನವೋದಯ ಕಾವ್ಯ, ಪುಟ ೧೬.

೩೭. ಬಿ.ಎಂ.ಶ್ರೀ, ಇಂಗ್ಲಿಷ್ ಗೀತೆಗಳು, ಪ್ರಸ್ತಾವನೆ, ಪುಟ xxiv ಮತ್ತು xxv.

೩೮. ಅದೇ, ಪುಟ xxviii.

೩೯. ಅದೇ, ಪುಟ ೨.

೪೦. ಡಾ.ದೊಡ್ಡರಂಗೇಗೌಡ, ಕನ್ನಡ ನವೋದಯ ಕಾವ್ಯ, ಪುಟ ೮೭.

೪೧. ಬಿ.ಎ.ಶ್ರೀ. ಅಶ್ವತ್ಥಾಮನ್, ಪುಟ ೨೬ ಮತ್ತು ೨೭.

೪೨. ಜಿ.ಎಸ್.ಸಿದ್ದಲಿಂಗಯ್ಯ, ಹೊಸಗನ್ನಡ ಕಾವ್ಯ, ಪುಟ ೨೦ ಮತ್ತು ೨೧.

೪೩. ಸಂ.ಗಿರಡ್ಡಿ ಗೋವಿಂದರಾಜ, ಕನ್ನಡ ನವೋದಯ ಕಾವ್ಯ; ಮಂಗಳೂರು ಕೇಂದ್ರ, ಲೇ ಬಿದರಹಳ್ಳಿ ನರಸಿಂಹಮೂರ್ತಿ, ಕಂಡೆಂಗೋಡ್ಲು ಶಂಕರಭಟ್ಟರ ಕಾವ್ಯ, ಪುಟ ೬೪.

೪೪. ಅದೇ, ಪುಟ ೬೭.

## ಹೊಸಗನ್ನಡದ ಕಾವ್ಯಾರಂಭದ ವಸ್ತು, ಭಾಷೆ, ಶೈಲಿ ಹಾಗೂ ಛಂದಸ್ಸು

ಪರಿವರ್ತನೆ ಜಗದ ಹಾಗೂ ಯುಗದ ನಿಯಮ್ಮ, ಸಾಹಿತ್ಯ ಕ್ಷೇತ್ರವು ಇದರಿಂದ ಹೊರತಾಗಿಲ್ಲ. ಸಮಕಾಲೀನ ಸಂಗತಿಗಳಿಗೆ ತಕ್ಕಂತೆ ವೇಷಭೂಣಗಳನ್ನು ಧರಿಸಬೇಕಾಗುತ್ತದೆ. ಹೊಸತನವೆಂದು ಕಾಣುವ ವೇಷಭೂಷಣವು ಹಳೆಯದರ ಸಂಬಂಧವನ್ನು ಪೂರ್ಣವಾಗಿ ಕಡಿದುಕೊಳ್ಳಲು ಸಾಧ್ಯವಿಲ್ಲ. "ನಿನ್ನೆಯ ಸೂರ್ಯನೇ ಇಂದು ನೂತನ ಕಾಂತಿಯಿಂದ ಹೊರಹೊಮ್ಮುವಂತೆ ಅಂದಿನ ಸಾಹಿತ್ಯದ ಸೃಷ್ಟಿಶಕ್ತಿಯೇ ನೂತನ ಕಾಂತಿಯಿಂದ ಕಾಣಿಸಿಕೊಳ್ಳುವುದು. ಹಳೆಯದರ ಮರುಹುಟ್ಟೇ ನವೋದಯದ ಗುಟ್ಟು. ಹಳತಿಲ್ಲದ ಹೊಸತೆಂಬುದು ಬರಿಯ ಭ್ರಾಂತಿ. ಕನ್ನಡ ಸಾಹಿತ್ಯ ಜೀವಪೂರ್ಣವಾದುದು. ಆದ್ದರಿಂದ ಅದರಲ್ಲಿ ಮೇಲಿಂದ ಮೇಲೆ ನವೋದಯಗಳಾಗುತ್ತಾ ನಡೆದಿದೆ."[1] ಎಂಬ ಶಾಮರಾಯರ ನುಡಿಗಳು ಹೊಸತನದ ಅರ್ಥವನ್ನು ಸ್ಪಷ್ಟಪಡಿಸುತ್ತವೆ. ಯಾವುದೇ ಒಂದು ಹೊಸ ಶೋಧನೆಯ ಹಿಂದೆ ಅವಿರತ ಪರಿಶ್ರಮವಿರುತ್ತದೆ. ಪುನರ್‌ಮೌಲ್ಯ ಮಾಪನದ ಪ್ರಕ್ರಿಯೆ ನಡೆದಿರುತ್ತದೆ. ಕನ್ನಡ ಸಾಹಿತ್ಯವು ತನ್ನ ಪರಂಪರೆಯ ಕರುಳಬಳ್ಳಿಯ ಸಂಬಂಧವನ್ನು ಉಳಿಸಿಕೊಂಡೇ ವಿಶಾಲ ವ್ಯಾಪ್ತಿಯನ್ನು ನಿರ್ಮಿಸಿಕೊಂಡಿದೆ. ಹಳೆಯದರ ಸತ್ವವನ್ನು ಹೀರಿಕೊಂಡು ಪಾಶ್ಚಾತ್ಯದ ಸಂಸರ್ಗವನ್ನು ಗಳಿಸಿಕೊಂಡು ತನ್ನದೇ ಆದ ಸ್ವಂತಿಕೆಯನ್ನು ಸ್ಥಾಪಿಸಲು ಸರ್ವ ಪ್ರಯತ್ನ ನಡೆಸಿದೆ.

ಕನ್ನಡ ಸಾಹಿತ್ಯದಲ್ಲಿ ಕಾವ್ಯಪರಂಪರೆಯು ವಿಶಿಷ್ಟ ಹೆಗ್ಗಳಿಕೆ ಪಡೆದಿದೆ. ಕಾಲದಿಂದ ಕಾಲಕ್ಕೆ ಹೊಸತನದ ಗಾಳಿಗೆ ಮೈಯೊಡ್ಡಿ ಸಾತ್ವಿಕತೆಯನ್ನು ಸಾಧಿಸಿದೆ. ಭಾಷೆ, ವಸ್ತು, ಶೈಲಿ ಹಾಗೂ ಛಂದಸ್ಸುಗಳಲ್ಲಿ ಆಧುನಿಕತೆಯತ್ತ ತುಡಿಯುತ್ತಾ ಬಂದಿರುವುದು ಇತಿಹಾಸದಿಂದ ಅರಿವಾಗುತ್ತದೆ. ಹೊಸಗನ್ನಡ ಕಾವ್ಯದ ಆರಂಭದಲ್ಲಿನ ಬಹಳಷ್ಟು ಕವಿಗಳು ಪರಂಪರಾಗತ ಕವಿತೆಗಳ ಮೊರೆಹೋಗುತ್ತಾರೆ ಕೆಲವರು ಪಾಶ್ಚಾತ್ಯಕಾವ್ಯಗಳತ್ತ ಅಡಿಯಿಡುತ್ತಾರೆ. ಇವುಗಳಲ್ಲಿರುವ ಸತ್ವದೊಡನೆ ಹೊಸ ಭಾವದೀಪ್ತಿಯಲ್ಲಿ ಕಾವ್ಯ ಕಟ್ಟುವತ್ತ ಕವಿ ಸಮುದಾಯವು ಹೆಜ್ಜೆ ಹಾಕಿತು. ಸಂಗಮ ಸ್ಥಿತಿಯ ಸಾರವನ್ನು ಆಮೂಲಾಗ್ರವಾಗಿ ಗ್ರಹಿಸಿದ ಕವಿಗಳು ಪರಂಪರೆಯ ಗೂಡಿನಿಂದ ಹೊಸಬರಲು ಪ್ರಯತ್ನಿಸಿದರು. ರಸಋಷಿ ಕುವೆಂಪು ಅವರು ಇಂತಹ ಸಂದಿಗ್ಧತೆಯ ಪ್ರತಿಕ್ರಿಯಿಸುತ್ತಾ "ರಸಋಷಿಯಾದ ಕವಿ ಅರ್ವಾಚೀನದ ಶಿಖರೇಶ್ವರದಲ್ಲಿ ನಿಂತು ತನ್ನೊಂದು ಕೈಯನ್ನು ಮುಸುಗತ್ತಲೆ ಕವಿದ ಪ್ರಾಚೀನದ ಗೋರಿಯೊಳಗೆ ನೀಡಿ ಹುಡುಕುತ್ತಿರುತ್ತಾನೆ. ಮತ್ತೊಂದು ಕೈಯನ್ನು ಅನಂತತೆಯ ಗಗನನೀಲಿಮೆ ತುಂಬಿರುವ ಭವಿಷ್ಯತ್ತಿನ ಅವ್ಯಕ್ತ ಗರ್ಭದ ಕಡೆಗೆ ಚಾಚಿ ತಡುವುತ್ತಿರುತ್ತಾನೆ"[2] ಹೊತನವೆಂದರೆ ಹಳತೆಲ್ಲವನ್ನು ತ್ಯಜಿಸುವುದಲ್ಲ. ಪರಂಪರೆಯ ತಳಹದಿ ಮೇಲೆ ಹೊಸ ಸೌಧವನ್ನು ನಿರ್ಮಾಣ ಮಾಡುವುದೇ ಆಗಿದೆ. ಪಲ್ಲಟಗೊಳ್ಳುವ ಸಾಮಾಜಿಕ ಮೌಲ್ಯಗಳಿಗೆ ಸಮಕಾಲೀನ ಸಂವೇದನೆಗಳನ್ನು ಕಾವ್ಯದ ಮೂಲಕ ನೀಡುವುದು ಹೊಸಗನ್ನಡ ಕಾವ್ಯದ ಆರಂಭ ಕವಿಗಳಿಗೆ ಆದ್ಯ ಕರ್ತವ್ಯವಾಗಿತ್ತು. ಸಮಕಾಲೀನ ಸಮಸ್ಯೆಗಳಿಗೆ ಸಂವೇದನೆಗಳನ್ನು ಅಭಿವ್ಯಕ್ತಪಡಿಸಲು ಸೂಕ್ತ ಭಾಷೆ, ಶೈಲಿ ಹಾಗೂ ಛಂದಸ್ಸನ್ನು ಅಳವಡಿಸಿಕೊಳ್ಳುವುದು ಅಗತ್ಯವಾಗಿತ್ತು. ೧೯ನೇ ಶತಮಾನದ ಸಾಮಾಜಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳು ಸಾಹಿತ್ಯದ ಮೇಲೆ ತೀವ್ರತರ ಪರಿಣಾಮವನ್ನುಂಟು ಮಾಡಿವೆ. ಹಾಗಾಗಿ

ಕಾವ್ಯದ ವಸ್ತು, ಭಾಷೆ, ಶೈಲಿ ಹಾಗೂ ಛಂದಸ್ಸುಗಳ ಬದಲಾವಣೆಯು ಕನ್ನಡ ಕಾವ್ಯದ ಮೇಲೆ ಬೀರಿದ ಪ್ರಭಾವವನ್ನು ಕುರಿತು ಪ್ರತ್ಯೇಕವಾಗಿ ಹಾಗೂ ಸಂಕ್ಷಿಪ್ತವಾಗಿ ತಿಳಿಯುವುದು ಸಂಶೋಧನೆಯ ದೃಷ್ಟಿಯಿಂದ ಅವಶ್ಯಕ.

**೧. ಹೊಸ ಆಯಾಮ ಪಡೆದ ಕಾವ್ಯವಸ್ತು**

ಕಾವ್ಯಸೃಷ್ಟಿಗೆ ಅಗತ್ಯವಾಗಿ ಬೇಕಾದ ಮೂಲದ್ರವ್ಯವೇ ವಸ್ತು, ಕಾವ್ಯವಸ್ತು ಸಮಾಜದ ಫಲಶ್ರುತಿಯಾಗಿದ್ದು ಕವಿಯ ಅನುಭವದ ಮೂಸೆಯಿಂದ ಮೂರ್ತರೂಪಪಡೆಯುತ್ತದೆ. ಕವಿಯು ಸಮಾಜದಲ್ಲಿನ ಸ್ಥಿತಿ ಗತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಸೂಕ್ತ ಅಭಿವ್ಯಕ್ತಿ ನೀಡಲು ಇಂಗ್ಲಿಷಿನ ಶಿಕ್ಷಣ ಪದ್ದತಿಯು ಪ್ರೇರಣೆ ನೀಡಿತು. ಪಾಶ್ಚಾತ್ಯ ಸಾಹಿತ್ಯಾಧ್ಯಯನವು ಕನ್ನಡ ಕವಿಗಳಲ್ಲಿ ಹೊಸ ಸಂಚಲನವನ್ನುಂಟು ಮಾಡಿತು. ಇದರ ಜೊತೆಗೆ ರಾಷ್ಟ್ರೀಯ ಚಳುವಳಿ, ಪುನರುಜ್ಜೀವನ ಚಟುವಟಿಕೆಗಳು ಕವಿಮನಸ್ಸಿನ ಸುಪ್ತಚೇತನವನ್ನು ಬಡಿದೆಬ್ಬಿಸಿದವು. ರಾಷ್ಟ್ರಭಕ್ತಿ, ಮಾನವಪ್ರೇಮ, ಶೌರ್ಯ, ಪ್ರಕೃತಿ ಸೌಂದರ್ಯ, ಸುಖ-ದುಃಖ, ರಾಗ, ದ್ವೇಷ, ಜಿಜ್ಞಾಸೆ, ಶ್ರದ್ಧೆ, ಸ್ವಾತಂತ್ರ್ಯ ಹೋರಾಟ, ದೇಶಭಾಷೆ, ಸ್ವಾಭಿಮಾನ, ಸ್ವಾತಂತ್ರ್ಯ, ಸಮಾನತೆ ಮುಂತಾದ ವಿಷಯಗಳನ್ನು ಕುರಿತು ಕಾವ್ಯಮೂಡಲಾಂಭಿಸಿದವು ಪ್ರಜಾಪ್ರಭುತ್ವದ ಪ್ರತಿಷ್ಠಾಪನೆ, ಮೂಢನಂಬಿಕೆಗಳ ವಿರುದ್ಧ ಜನರಲ್ಲಿ ಜಾಗೃತಿ, ವೈಚಾರಿಕ ಸಮರ್ಥನೆಗಳು ಕಾವ್ಯಕ್ಕೆ ವಸ್ತುವಾದವು.

ಪುರಾಣ ಪ್ರಸಿದ್ಧವಾದ ರಾಮಾಯಣ, ಮಹಾಭಾರತ, ಕಥಾನಕಗಳು ಪುನರ್ ಮೌಲ್ಯೀಕರಣಗೊಳ್ಳತೊಡಗಿದವು. ಇಲ್ಲಿನ ವಸ್ತುವಿನ ಎಳೆಯೊಂದನ್ನೆತ್ತಿಕೊಂಡ ಕವಿಯು ಸಮಕಾಲೀನ ಪ್ರಚೋದನೆಗೆ ಇಂಬುಗೊಟ್ಟು ಸ್ವತಂತ್ರವಾದ ಚಿಂತನಾಲಹರಿಯನ್ನು ಒಳಗೊಂಡ ಕಾವ್ಯರಚನೆಗೆ ಆಸಕ್ತಿ ತೋರಿದನು. ನಾಡು ನುಡಿಯನ್ನು ಕುರಿತು ಅಪಾರ ಪ್ರೀತಿ ತೋರಿದ ಕವಿಯು ತನ್ನ ತಾಯ್ನೆಲ ಹಾಗೂ ತಾಯ್ನುಡಿಯ ಹಿರಿಮೆ ಗರಿಮೆಗಳನ್ನು ಎತ್ತಿ ಹಿಡಿಯುವ ಕವಿತೆಗಳನ್ನು ರಚಿಸಿದನು. ಕನ್ನಡ ಭಾಷೆಯ ಉಳಿವಿಗಾಗಿ ಕರ್ನಾಟಕದ ಐಕ್ಯತೆಗಾಗಿ ಜನರನ್ನು ಎಚ್ಚರಗೊಳಿಸಲಾಯಿತು. ಕನ್ನಡದ ದಾಸಯ್ಯ ಶಾಂತಕವಿಗಳು ಕನ್ನಡದ ಕೆಚ್ಚನ್ನು ಜನರಲ್ಲಿ ತುಂಬಲು ಕೀರ್ತನೆಗಳನ್ನು ರಚಿಸಿ ಊರೂರು ಸುತ್ತಿ ಕೀರ್ತನೆಗಳನ್ನು ಹಾಡಿ, ಕಾಲಿಗೆ ಗೆಜ್ಜೆಕಟ್ಟಿ ಕುಣಿದು ಅಭಿನಯಿಸಿ ಜನರನ್ನು ನಾಡು ನುಡಿಯ ಉಳಿವಿಗಾಗಿ ಹೋರಾಡಲು ಅಣಿಗೊಳಿಸಲೆತ್ನಿಸಿದ ಈ ಹಾಡು ತುಂಬ ಪ್ರಸಿದ್ಧವಾದುದು.

"ಬೇಡಲು ಕನ್ನಡ ದಾಸಯ್ಯ ಬಂದಿಹ |

ನೀಡಿರಮ್ಮಾ! ಚಡೆಮಾಡದಲೇ ‖ ಪ ‖

ಹಾಡೊಂದನಾತನು ಹೊಸದಾಗಿ ಮಾಡಿಹ |

ಕೂಡಿರಿ ಕೇಳಿರಿ ಹಾಡುವನು‖ ಅನುಪಲ್ಲವಿ‖

ಕನ್ನಡ ಮಾತಿನ ತಂದೆ ತಾಯಿಗಳಿಂದ

ಚೆನ್ನಚೆನ್ನೆಯರೆಲ್ಲ ಹುಟ್ಟಿದಿರಿ||

ಕನ್ನಡ ಮಾತಿನ ಜೋಗುಳವನು ಕೇಳಿ

ಕನ್ನಡ ತೊಟ್ಟಿಲೊಳಾಡಿದಿರಿ ||"[೩]

ಈ ಹಾಡಿನಲ್ಲಿರುವ ಸ್ವೋಪಜ್ಞತೆಯನ್ನು, ಸ್ಪಷ್ಟತೆಯನ್ನು ಗಮನಿಸಿದಾಗ ಹೊಸಗನ್ನಡ ಕಾವ್ಯದ ಆರಂಭಕಾಲದ ಕವಿ ಮನಸ್ಸು ತನ್ನನ್ನು ದೇಶ ಹಾಗೂ ಭಾಷೆಯ ಸೇವಕನೆಂದು ಭಾವಿಸಿಕೊಂಡಂತಿದೆ. ಮತ್ತೊಂದೆಡೆ ಕನ್ನಡಿಗನಿಗೆ ಕರೆಕೊಡುವ ಪರಿಯನ್ನು ನೋಡಿ,

"ಕನ್ನಡೆ ಕನ್ನಡೆ

ನಿನ್ನ ವಸ್ತುವದು

ಕನ್ನಡೆ ಕೇಳೈ ಕನ್ನಡಿಗ || ಪಲ್ಲವಿ ||

ಪಂಚವರ್ಣಗಳ ಪಂಚರೂಪಗಳ| ಪಂಚಸ್ಥಳಗಳ ಕನ್ನಡೆಯು ||

..... ಎಂದು ಹೇಳಿ

ಕರ್ಣಾಟಕಮಿದು

ವರ್ಣನೀಯವಿದೆ

ಕರ್ಣಾಟಕ ದೇವಿಗೆ ನಮಿಸು"[೪]

ಎಂದು ಹೇಳುವಲ್ಲಿ ಕವಿಯ ಮನೋಭಾವವು ಎಲ್ಲರಿಗೂ ಅರ್ಥವಾಗುವಂಥದ್ದೆ. ಕನ್ನಡ ತಾಯಿಯನ್ನು ರಕ್ಷಿಸುವ ಹೊಣೆಗಾರಿಕೆ ಎಲ್ಲರ ಮೇಲೂ ಇದೆ ಎಂದು ಹೇಳುತ್ತಿರುವ ಕವಿ ಮನಸ್ಸು ಅಖಂಡ ಕನ್ನಡ ಕವಿಗಳನ್ನು ಪ್ರತಿನಿಧಿಸುತ್ತಿದೆ. ಕನ್ನಡವೇ ಕವಿಗೆ ಕಾವ್ಯ ವಸ್ತುವಾಗಿರುವುದನ್ನು ನೋಡಿದಾಗ ಪರಂಪರಾಗತ ಕಾವ್ಯವಸ್ತುವಿಗೆ ಬೆನ್ನುತಿರುಗಿಸಿ ತನ್ನ ಸುತ್ತಾಲಿನ ಸನ್ನಿವೇಶವನ್ನು ಅರಿತು ಅದಕ್ಕಾಗಿ ಪ್ರತಿಕ್ರಿಯಿಸುತ್ತಿದ್ದಾನೆ.

ರಾಷ್ಟ್ರೀಯ ಪುನರುಜ್ಜೀವನಕ್ಕಾಗಿ ಟೊಂಕಕಟ್ಟಿ ನಿಂತು ಜನರನ್ನು ಜಾಗೃತರನ್ನಾಗಿಸಿದ ರಾಜಾರಾಂ ಮೋಹನರಾಯ್, ಎಂ.ಜಿ.ರಾನಡೆ, ದಯಾನಂದ ಸರಸ್ವತಿ, ಗೋಪಾಲಕೃಷ್ಣ ಗೋಖಲೆ, ಜ್ಯೋತಿ ಬಾ ಪುಲೆ, ಬಾಲಗಂಗಾಧರ ತಿಲಕ್, ಆನಿಬೆಸೆಂಟರ ವಿಚಾರ ಧಾರೆಗಳು ಕನ್ನಡ ಕಾವ್ಯದ ಮೇಲೆ ನಿರ್ಣಾಯಕ ಪ್ರಭಾವ ಬೀರಿವೆ. ಇಂಗ್ಲಿಷ್‌ಶಿಕ್ಷಣ, ಇಂಗ್ಲಿಷ್ ಸಾಹಿತ್ಯ, ಪಾಶ್ಚಾತ್ಯ ವಿಚಾರಗಳು ಕನ್ನಡ ಕವಿಕುಲದಲ್ಲಿ ಸಂಚಲನವನ್ನುಂಟು ಮಾಡಿ ಜಾತೀಯತೆ, ಸ್ತ್ರೀಶೋಷಣೆ, ಬಾಲ್ಯವಿವಾಹ, ಬಹುಪತ್ನಿತ್ವ, ಮೂಢನಂಬಿಕೆ ವಿಗ್ರಹಾರಾಧನೆ ಅಸ್ಪೃಶ್ಯತೆ ಮುಂತಾದವುಗಳನ್ನು ನವಿರಾಗಿ ವಿಡಂಬಿಸುವ ಕಾವ್ಯಗಳೂ ಜನ್ಮತಾಳಿದವು. ಹೀಗೆ ಹೊಸಗನ್ನಡ ಕಾವ್ಯಾರಂಭದ ಕವಿಗಳು ಹೊಸ ವಿಚಾರಧಾರೆಗಳನ್ನು, ಸಮಕಾಲೀನ ಸಂದಿಗ್ದತೆಗಳನ್ನು ಅನಾವರಣಗೊಳಿಸುವ ಕವಿತೆಗಳನ್ನು ರಚಿಸಿದರು.

**೨. ಜನಭಾಷೆಯಾದ ಕಾವ್ಯ ಭಾಷೆ**

ಸಂವಹನದ ಪರಿಣಾಮಕಾರಿ ಮಾಧ್ಯಮ, ಯಾದೃಚ್ಛಿಕ ಧ್ವನಿಸಂಕೇತಗಳ ವ್ಯವಸ್ಥೆಯಿಂದ ಕೂಡಿದುದೇ ಭಾಷೆ, ಪರಂಪರೆಯ ಪುರೋಭಿವೃದ್ಧಿಗೆ ಹಾಗೂ ಸಮಕಾಲೀನ ಸಮಸ್ಯೆಯ ಅಭಿವ್ಯಕ್ತಿಗೆ ಭಾಷೆಯು ಕಲ್ಪವೃಕ್ಷವಿದ್ದಂತೆ. ಲಿಪಿಯು ಕಾಮಧೇನುವಿದ್ದಂತೆ "ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೆತ್ರಗಳಲ್ಲಿ ಭಾಷೆಯ ಸಹಾಯವಿಲ್ಲದೆ ಇದ್ದಿದ್ದರೆ ಮನುಷ್ಯ ಹೇಗೆ ಪ್ರಗತಿಯನ್ನು ಸಾಧಿಸದ್ದನೆಂಬುದು ಊಹೆಗೂ ಅಸಾಧ್ಯ."[೫] ಭಾಷೆಯು ಪ್ರತಿಯೊಬ್ಬರಿಗೂ ಅಂತರಂಗದ ಚಿತ್ತವೃತ್ತಿಗಳನ್ನು ಅಭಿವ್ಯಕ್ತಿ ಪಡಿಸಲು ಒಂದು ಅತ್ಯಮೂಲ್ಯ ಸಾಧನವಾಗಿದೆ. ಭಾಷೆಯ ಕಲಾತ್ಮಕ ಅಭಿವ್ಯಕ್ತಿಯೇ ಕಾವ್ಯವಾಗಿದ್ದು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುತ್ತದೆ.

ಪ್ರಾಚೀನ ಕನ್ನಡ ಕಾವ್ಯ ಭಾಷೆಯು, ಪಂಡಿತ, ಪ್ರಣೀತ ಭಾಷೆಯಾಗಿದ್ದು ಕೇವಲ ಆಸ್ಥಾನದಲ್ಲಿ ಅಲಂಕಾರಿಕ ಭಾಷೆಯಾಗಿ ಶೋಭಿಸುತ್ತಿತ್ತು ಸಂಸ್ಕೃತ ಪ್ರಭಾವಕ್ಕೆ ಒಳಗಾಗಿದ್ದ ಅಂದಿನ ಕವಿಗಳು ಕನ್ನಡವನ್ನೂ ಸಂಸ್ಕೃತ ಮಯವನ್ನಾಗಿಸಿಬಿಟ್ಟಿದ್ದರು. ಅಂಡಯ್ಯನು ಅಚ್ಚಗನ್ನಡ ಭಾಷೆಯಲ್ಲಿ ಕಾವ್ಯರಚಿಸುವ ಪ್ರಯತ್ನ ನಡೆಸಿದ್ದನು. ಹೊಸಗನ್ನಡ ಕಾವ್ಯದ ಮುಂಗೋಳಿ ಎಂದೇ ಕರೆಯಲ್ಪಟ್ಟ ಮುದ್ದಣನು 'ತಿರುಳ್ಗನ್ನಡದೊಳ್ ಕತೆಯನುಸಿರ್ವು'ದಾಗಿ ರಾಮಾಶ್ವ ಮೇಧದಲ್ಲಿ ಹೇಳುವ ಮೂಲಕ ಹೊಸ ಭಾಷೆಯ ಪ್ರಸ್ತಾಪ ಮಾಡುತ್ತಾನೆ. ಸಂಸ್ಕೃತ ಭಾಷೆಯ ಪದಪುಂಜಗಳಿಗೆ ತಡೆಯೊಡ್ಡುವ, "ನೀರಿಳಿಯದ ಗಂಟಲೊಳ್ ಕಡುಬು ತುರುಕಿದಂತಾಯ್ತೆ"ಂದು ಪ್ರತಿಭಟಿಸುವ ಪ್ರಯತ್ನ ಮುದ್ದಣನಿಂದಲೇ ಆಗುತ್ತದೆಂಬುದು ಗಮನಾರ್ಹ ವಿಚಾರ.

ಸಂಸ್ಕೃತ ಭಾಷೆಯಲ್ಲಿ ಪಂಡಿತನಾಗದಿದ್ದರೂ ಮುದ್ದಣನಲ್ಲಿ ಕನ್ನಡದ ಬಗ್ಗೆ ಉತ್ಕಟ ಅಭಿಮಾನ ವ್ಯಕ್ತವಾಗಿದೆ. ಆದರೆ ಸಂಸ್ಕೃತರಾಹಿತ್ಯ ಕಾವ್ಯ ತಿರಸ್ಕೃತವಾಗಿಬಿಡಬಹುದೆಂಬ ಭಯವು ಕಾವ್ಯದುದ್ದಕ್ಕೂ ಬಿಡದೇ ಕಾಡಿದೆ. ಅದಕ್ಕಾಗಿಯೆಸಂಸ್ಕೃತ ಪ್ರಣೀತ ದೀರ್ಘಪದಪುಂಜಗಳೂ ಅಲ್ಲಲ್ಲಿ ಗೋಚರವಾಗುತ್ತವೆ. ಸಂಸ್ಕೃತಕ್ಕೆ ಬದಲಾಗಿ ದೇಸೀಯ ನವೀನ ಪದಗಳ ಸೃಷ್ಟಿಕರ್ತನಾಗಿ ತೋರುವ ಮುದ್ದಣನು ಅದ್ಭುತ ಶಬ್ದ ಸಂಪತ್ತನ್ನು ಹೊಂದಿದ್ದನು. ಅವನು ಕೆಲ ಪದಗಳನ್ನು ಹೊಸಗನ್ನಡಕ್ಕೆ ಪರಿವತಿಸುವ ರೀತಿಯನ್ನು ಕಾವ್ಯದಲ್ಲಿ ಗುರುತಿಸಬಹುದು. "ಜಲಜವನ್ನು 'ನೀರ್ವೂ' ಎಂದೂ, ಮಂದಮಾರುತವನ್ನು 'ಕಿರುವೆಲರ್' ಎಂದೂ, ಪುಷ್ಪಲತೆಗೆ 'ಪೂವಳ್ಳಿ' ಎಂದೂ ಮಂದಸ್ಮಿತವನ್ನು 'ಕಿರುನಗೆ' ಎಂದೂ, ಚತುರ್ಮುಖವನ್ನು 'ನಾಲ್ಮೊಗ' ಎಂದೂ, ಕಪಿಯನ್ನು 'ಮಲೆನಾಡಿಗ' ಎಂದೂ ಸಪ್ತಸಾಗರವನ್ನು 'ಕಡಲೇಳ್' ಎಂದೂ, ವಿಮಾನವನ್ನು 'ಗಾಳಿದೇರ್' ಎಂದೂ, ದೇವತೆಗಳನ್ನು 'ಸಗ್ಗಿಗರ್' ಎಂದೂ ಮುದ್ದಣ ಕನ್ನಡೀಕರಿಸಿರುವ ರೀತಿ"[೬] ಭಾಷೆಯ ವಿಚಾರದಲ್ಲಿ ದಿಟ್ಟತನದ ಹೆಜ್ಜೆ. ಸರಣಿ ಪದಪುಂಜದ ಕಾವ್ಯಭಾಷೆಯು ಸರಳ, ಬಿಡಿ ಬಿಡಿಯಾದ ದೇಸಿನುಡಿಯತ್ತ ಹೊರಳಿರುವುದು, ಜನರಿಗೂ ಕಾವ್ಯ ತಲುಪಬೇಕೆಂಬ ಆಸೆಯನ್ನು ಕವಿ ಹೊಂದಿರುವುದು ಸ್ಪಷ್ಟ.

ಆಂಗ್ಲ ಕವಿತೆಗಳನ್ನು ಕನ್ನಡಕ್ಕೆ ತಂದು ಹೊಸಗಾಳಿಯು ಕನ್ನಡದಲ್ಲಿ ಬೀಸಲು ಕಾರಣರಾದ

ಮೊದಲಿಗೆರೆಂದರೆ ಹಟ್ಟಿಯಂಗಡಿ ನಾರಾಯಣರಾಯರು ಹಾಗೂ ಬಿ.ಎಂ.ಶ್ರೀಕಂಠಯ್ಯನವರು. ನಾರಾಯಣರಾಯರ 'ಆಂಗ್ಲಕವಿತಾವಳಿ' ಶ್ರೀಯವರ 'ಇಂಗ್ಲಿಷ್ ಗೀತೆಗಳು' ಅನುವಾದ ಕವಿತೆಗಳ ಸಂಕಲನಗಳು, ನಾರಾಯಣರಾಯರ ಕಾವ್ಯಭಾಷೆಯು ಸಂಸ್ಕೃತಭೂಯಿಷ್ಠ, ಕ್ಲಿಷ್ಟ, ಪಾಂಡಿತ್ಯಪೂರ್ಣ ಹಾಗೂ ಆಡಂಬರ ಎಂದೆನಿಸುತ್ತದೆ. ಶ್ರೀಯವರ ಕಾವ್ಯಭಾಷೆಯು ಆಡುಮಾತಿನ ಲಯ, ದೈನಂದಿನ ಜೀವನದ ನುಡಿಗಟ್ಟು, ಸರಳ, ನಿರಾಡಂಬರದ ವರ್ಣನೆ, ಮುಂತಾದವುಗಳಿಂದಗಾಇ ಕಾವ್ಯಭಾಷೆಗೆ ಹೊಚ್ಚ ಹೊಸತನ ಮೈದಾಳಿದೆ.

ಉದಾ-: ಹೆನ್ರಿ ವಾಟನ್‌ನ 'Character of a happy life' ಕವನವನ್ನು ನಾರಾಯಣರಾಯರು ನಿತ್ಯಸುಖಿ ತಲೆಬರಹದಡಿಯಲ್ಲಿಯೂ, ಶ್ರೀಯವರು 'ಸುಖಜೀವನ' ಎಂಬ ಶೀರ್ಷಿಕೆಯಡಿಯಲ್ಲಿಯೂ ಭಾಷಾಂತರ ಮಾಡಿರುವುದನ್ನು ಗಮನಿಸಬಹುದು.

ನಾರಾಯಣರಾಯರು

"ಪರರ ತುಷ್ಟಿಗೆ ದಣಿಯದವನ ಸುಖಿಕೆಣೆಯಲ್ಲಿ
ಸರಲ ಭಾವದ ಕವಚದಂತೆ ರಕ್ಷಣವೆಲ್ಲಿ
ಸತ್ಯ ಶೀಲತೆ ನಿತ್ಯಸುಖಿಗೆ ಬಲು ಜಾಣತನ
ಭೃತ್ಯರಂತರ್ಪಿಸುವುದಿಂದ್ರಿಯಗಳಾಳುತನ"

ಶ್ರೀಯವರು

ಏನು ಸುಖಿಯೋ ತಾನು ಹುಟ್ಟಿನಲಿ ಕಲಿಕೆಯಲಿ
ಇನ್ನೊಬ್ಬನಿಚ್ಚೆಯನು ದುಡಿಯದಿರುವವನು
ಒಳ್ಳಿತನು ಬಗೆವುದೇ ತನ್ನ ಕಾಯುವ ಯಂತ್ರ
ನಿಜದ ನಡೆತೆಯೆ ತಂತ್ರ ತನಗೆನಿಸಿದವನು."[2]

ನಾರಾಯಣರಾಯರ ಭಾಷಾಂತರದಲ್ಲಿ ಬಂದಿರುವ ಪರರತುಷ್ಟಿ, ಸರಲ, ಸುಖಿಕೆಣೆ, ಸತ್ಯಶೀಲ, ನಿತ್ಯಸುಖಿ, ಅನಗತ್ಯವಾಗಿ ಬಳಕೆಯಾಗಿರುವ "ಬೃತ್ಯರಂತರ್ಪಿಸುವುವಿಂದ್ರಿಯಗಳಾಳುತನ" ಪದಗಳನ್ನು ಗಮನಿಸಿದಾಗ ಕವಿ ಸಂಸ್ಕೃತಕ್ಕೆ ಋಣಿಯಾಗಿರುವುದು, ಕ್ಲಿಷ್ಟತೆಗೆ, ಪಾಂಡಿತ್ಯ ಪ್ರದರ್ಶನಕ್ಕೆ ಪ್ರಯತ್ನಿಸಿರುವುದೋ? ಅಥವಾ ಸಮಕಾಲೀನ ಕವಿಗಳಿಂದ ಮೆಚ್ಚುಗೆ ಪಡೆಯುವ ಅನಿವಾರ್ಯತೆಯೋ ಎಂಬ ಜಿಜ್ಞಾಸೆಯು ಕಾಡುತ್ತದೆ. ಆದರೆ ಶ್ರೀಯವರ ಭಾಷಾಂತರದಲ್ಲಿ ಇಂತಹ ಗ್ರಹಿಕೆಗಳಿಗೆ ಅವಕಾಶವಿಲ್ಲವೆಂಬುದು ಅವರ ಪದ್ಯದಿಂದಲೇ ಅರ್ಥವಾಗುತ್ತದೆ.

ಪ್ರಾಸಪದ್ಧತಿಗೆ ಜೋತುಬಿದ್ದಿದ್ದ ಅಂದಿನ ಕವಿಗಳು ಪ್ರಾಸಕ್ಕಾಗಿ ಅನವಶ್ಯಕ, ಅರ್ಥರಹಿತ ಪದಗಳನ್ನು ತುಂಬಿರುವುದೂ ಕಂಡುಬರುತ್ತದೆ. ಭಾಷೆಯಲ್ಲಿ ಇಂಥ ಗೊಂದಲಗಳಿಗೆಡೆ ಮಾಡಿಕೊಡುವ ಪ್ರಾಸವನ್ನು ತ್ಯಜಿಸುವ ಗಟ್ಟಿನಿರ್ಧಾರವನ್ನು ಗೋವಿಂದ ಪೈ ಅವರು ಸಮಕಾಲೀನರ ವಿರೋಧದ ನಡುವೆಯೂ ಕೈಗೊಂಡಿದ್ದು ಪ್ರಶಂಸಾರ್ಹವಾದುದು. ಇವರ ತರುವಾಯ ಕಾವ್ಯಭಾಷೆಯು ಜಾನಪದ ಸರಳತನದಿಂದ, ಸಮಕಾಲೀನ ಶಿಷ್ಟತೆಯಿಂದ ಬಳಕೆಯಾಯಿತು. ಪ್ರಾಸವನ್ನುಳಿಸಿಕೊಂಡು ಹೊಸಗನ್ನಡ ಭಾಷೆಯಲ್ಲಿ ಕಾವ್ಯ ಸೃಜಿಸಿದ ಅನೇಕ ಕವಿಗಳಿದ್ದಾರೆ. ಪಂಜೆ ಮಂಗೇಶರಾಯರು ಸರಳವಾದ ಜನಭಾಷೆಯಲ್ಲಿ ನಾಡು ನುಡಿಯ ಅಭಿಮಾನ ಐಕ್ಯತೆಯನ್ನು ಪ್ರತಿಪಾದಿಸುವ ಪದ್ಯಗಳನ್ನು ರಚಿಸಿದ್ದಾರೆ.

"ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ?

ಸಾಕು, ಸುತ್ತಲು ನೋಡು ಕಣ್ದೆರೆದು ನಿಂದು

ಲೋಕದಲಿ 'ವಂದೆ ಮಾತರಂ' ಎಂಬುದೊಂದೆ ಮಾ

ತೀ ಕಿವಿಯನೊಡೆಯುತಿದೆ ಉಚ್ಚಳಿಸಿ ಬಂದು." ೮

ಈ ಪದ್ಯವು ಹೊಸಗನ್ನಡ ಕಾವ್ಯಾರಂಭದ ಸರಳಭಾಷೆಗೆ ಒಂದು ಪ್ರಾತಿನಿಧಿಕ ಅಷ್ಟೆ. ಶಾಂತಕವಿಗಳು, ಎಸ್.ಜಿ.ನರಸಿಂಹಾಚಾರ್ಯರು, ಸೇಡಿಯಾಪು ಕೃಷ್ಣಭಟ್ಟರು, ಜಯರಾಯಾಚಾರ್ಯರು, ಮುಂತಾದ ಹೊಸಗನ್ನಡ ಕವಿತೆಯ ಆರಂಭಕಾಲದ ಕವಿಗಳೆಲ್ಲರೂ ಸಂಸ್ಕೃತ ಕಬಂಧಬಾಹುವಿನಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾಡಿ ಹೊಸಗನ್ನಡದಲ್ಲಿ ಕಾವ್ಯರಚಿಸಿದ್ದಾರೆ.

### ೩. ಸ್ವತಂತ್ರ ಮಾದರಿಯತ್ತಶೈಲಿ

ಕವಿಯೊಬ್ಬ ತನ್ನ ಅನುಭವಗಳನ್ನು ರೂಪಗೊಳಿಸಲು ಪೂರಕವಾಗಿರುವ ಅಗತ್ಯ ರೀತಿಗಳ ಮೊತ್ತವೇ ಶೈಲಿ. ಇಲ್ಲಿ ಕವಿಯು ತನ್ನ ಅನುಭವಗಳ ಅಭಿವ್ಯಕ್ತಿಗೆ ಸ್ವತಂತ್ರವಾದ ಸಿದ್ಧ ಮಾದರಿಯನ್ನು ಬಯಸುತ್ತಾನೆ. ತನಗೆ ಸೂಕ್ತ ಎಂದೆನಿಸುವ ಮಾದರಿಯಲ್ಲಿ ಕಾವ್ಯವನ್ನು ಕಟ್ಟುತ್ತಾನೆ.ಕವಿಯು ಅನುಭವಗಳನ್ನು ಅಭಿವ್ಯಕ್ತಿ ಪಡಿಸುತ್ತಿರುವಾಗ ಸ್ವತಂತ್ರವಾಗಿ, ವಿಭಿನ್ನವಾಗಿ ರೂಪುಗೊಳ್ಳುವ ರೀತಿಯೇ ಶೈಲಿ. ಇದು ಕವಿಯಿಂದ ಕವಿಗೆ ಭಿನ್ನವಾಗಿದ್ದು ವ್ಯಷ್ಠಿಯಿಂದ ಸಮಷ್ಠಿಯತ್ತ ಸಾಗುತ್ತದೆ. ಕವಿಯ ವ್ಯಕ್ತಿತ್ವವೂ ಕೂಡ ಶೈಲಿಯ ಮೂಲಕ ನಿರ್ಧಾರವಾಗಬೇಕಾಗುತ್ತದೆ. ವ್ಯಕ್ತಿಗತವಾದ ಕವಿ ಪ್ರತಿಭೆಯನ್ನು ಶೈಲಿಯ ಮಾನದಂಡವೂ ನಿರ್ಧರಿಸುವುದರಿಂದ ಇದು ಓದುಗರ ಮೇಲೆ ಪ್ರಭಾವ ಬೀರುತ್ತದೆ.

ಹೊಸಗನ್ನಡ ಕಾವ್ಯದ ಆರಂಭಕವಿಗಳು ಅನುವಾದ ಸಾಹಿತ್ಯವನ್ನು ನಿರ್ಮಾಣ ಮಾಡುವಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದರು. ಅವರು ಪ್ರಾಚೀನ ಪರಂಪರೆಯ ಛಂದೋರೂಪಗಳಾದ ಷಟ್ಪದಿ, ಸಾಂಗತ್ಯ, ವೃತ್ತ, ಕಂದಪದ್ಯ, ಚೌಪದಿಗಳಲ್ಲಿ ಕಥನಗೀತೆಗಳು, ನಾಟಕಗಳ ಅನುವಾದಗಳನ್ನು ಮಾಡುತ್ತಿದ್ದರು. ಕೆಲವರು ದೈವಭಕ್ತರಾಗಿದ್ದು ಭಕ್ತಿ ಸಾಹಿತ್ಯಕ್ಕೂ ಒಲವನ್ನು ತೋರಿದರು. ಆದರೆ ಈ ಪರಂಪರೆ ಕ್ಷೀಣಿಸತೊಡಗಿತು.

"ಅನುವಾದಕಾರರು ಮೂಲಶೈಲಿಯ ಒಂದು ಅಥವಾ ಎರಡು ಅಥವಾ ಕೆಲವು ಅಂಶಗಳನ್ನು ಮಾತ್ರ ಅನುವಾದದಲ್ಲಿ ಉಳಿಸಿದುದರಿಂದ ಈ ಅಂಶಗಳು ಅನೇಕಾವರ್ತಿ ಕೃತಿಯ ಆಂತರ್ಯಕ್ಕಿಂತ ಹೊರಗಿನ ವೇಷಕ್ಕೆ ಮಾತ್ರ ಸಂಬಂಧಿಸಿದುದರಿಂದ ಮೂಲದ ವೈವಿಧ್ಯದ ತೋರಿಕೆ ಕನ್ನಡದಲ್ಲಿ ಉಳಿಯಿತೇ ವಿನಃ ಅದರ ಸ್ವತ್ವತಲ್ಲ"[೯] ಕ್ರೈಸ್ತಗೀತೆಗಳು, ಕ್ರಿಸ್ತನನ್ನು ಆರಾಧಿಸುವ ಗೀತೆಗಳು ಸ್ವತಂತ್ರ ಸ್ವರೂಪನ್ನು ಗದ್ಯಶೈಲಿಯ ಕೀರ್ತನೆಗಳಲ್ಲಿ ಪಡೆದವು. ಸಂಸ್ಕೃತ ಹಾಗೂ ಆಂಗ್ಲ ನಾಟಕಗಳ ಅನುವಾದ ಕಾರ್ಯದಲ್ಲಿ ಕನ್ನಡ ಭಾಷಾಂತರಕಾರ ಕವಿಗಳು ಮೂಲವನ್ನೆ ಕನ್ನಡಕ್ಕೆ ಪಡಿಯಚ್ಚನ್ನಿಳಿಸದೆ ಕನ್ನಡದ ಜಾಯ ಮಾನಕ್ಕೆ ಹೊಂದುವಂತೆ ಶೈಲಿಯನ್ನು ಅಳವಡಿಸಿಕೊಂಡರು, ಈ ಅಳವಡಿಕೆಯಲ್ಲಿ ಕೆಲವು ಭಾಗಗಳಲ್ಲಿ ಮೂಲದ ಆಶಯವನ್ನೆ ತಿರುಚಿರುವುದು ಕಾಣುತ್ತದೆ. ಹಟ್ಟಿಯಂಗಡಿ ನಾರಾಯಣರಾಯರಲ್ಲಿ ಇದು ದೋಷವಾಗಿ ಕಂಡರೆ ಬಿ.ಎಂ.ಶ್ರೀಯವರ ಅನವಾದದಲ್ಲಿ ಗುಣವಾಗಿ ಕಾಣುತ್ತದೆ. ಹಲವು ಶಿಶುಗೀತೆಗಳು, ಕಥನಗೀತೆಗಳು, ಲಾವಣಿಗಳು, ಸ್ವಾಭಿಮಾನ ಉಕ್ಕಿಸುವ ಗೀತೆಗಳು ವಿವಿಧ ಕವಿಗಳಿಂದ ವಿವಿಧ ಶೈಲಿಗಳಲ್ಲಿ ರಚನೆಯಾಗಿವೆ.

**೪. ಬದಲಾವಣೆಗೆ ಅಣಿಯಾದ ಛಂದಸ್ಸು**

ಹೊಸಗನ್ನಡ ಕಾವ್ಯದ ಆರಂಭದಲ್ಲಿ ಕವಿಮನೋಧರ್ಮದಲ್ಲಿ ಹಲವು ತೀವ್ರತರ ಬದಲಾವಣೆಗಳಾದವು. ಅವುಗಳಲ್ಲಿ ಮೊದಲನೆಯದು ವಸ್ತು, ಎರಡನೆಯದು ಛಂದಸ್ಸು, "ಹಿಂದಿನ ಕಂದ ಷಟ್ಪದಿಗಳ ಕಟ್ಟನ್ನು ಮುರಿದು ಸ್ವತಂತ್ರವಾದ ಛಂಧೋ ರೂಪಗಳನ್ನು ಕವಿ ನಿರ್ಮಿಸಿಕೊಂಡಿದ್ದಾನೆ. ರಮಣೀಯವಾದ ಅಚ್ಚುಕಟ್ಟಾದ ರಚನೆಯಿಂದ ಹಿಡಿದು ಸ್ವಚ್ಛಂದ ಛಂದಸ್ಸಿನವರೆಗೆ ವಿವಿಧ ಛಂದೋ ರೂಪಗಳನ್ನು ನಾವು ಗುರುತಿಸಬಹುದು"[೧೦] ಎಂಬ ಜಿ.ಎಸ್.ಎಸ್ ಅವರ ನುಡಿಗಳಲ್ಲಿ ಛಂದಸ್ಸಿನ ಬದಲಾವಣೆಯನ್ನು ಗುರುತಿಸಬಹುದಾಗಿದೆ. ಛಂದಸ್ಸಿನಲಿ ಹೊಸತನವನ್ನು ಅಳವಡಿಸಿಕೊಳ್ಳಲು ಆರಂಭದ ಕವಿಗಳು ಹಿಂಜರಿಕೆಯನ್ನು ತೋರಿರುವುದೂ ಕಂಡು ಬರುತ್ತದೆ. ಅದಕ್ಕಾಗಿಯೇ ಮುದ್ದಣನಂಥ ಮೇರುಪ್ರತಿಭೆಗಳು ಎಲೆಮರೆಯ ಕಾಯಿಯಂತೆ ಮರೆಯಾಗಿಯೇ ಉಳಿಯಬೇಕಾಯಿತು.

ಚುರಮುರಿ ಶೇಷ ಗಿರಿರಾಯರು, ಬಸವಪ್ಪಶಾಸ್ತ್ರಿಗಳು, ಮುದ್ದಣ, ಹಟ್ಟಿಯಂಗಡಿ ನಾರಾಯಣ ರಾಯರು, ಶಾಂತಕವಿಗಳು ಮುಂತಾದ ಆರಂಭಕಾಲದ ಬರಹಗಾರರು ಭಾಷಾಂತರಗಳು ಹಾಗೂ ಸ್ವತಂತ್ರ ಬರವಣಿಗೆಗಳನ್ನು ಪರಂಪರಾಗತ ಛಂದೋಪ್ರಕಾರಗಳಾದ ಷಟ್ಪದಿ, ಸಾಂಗತ್ಯ, ಕಂದಪದ್ಯ, ಚೌಪದಿಗಳಲ್ಲಿಯೇ ರಚಿಸಿರುವುದು ಹೆಚ್ಚಾಗಿ ಕಂಡು ಬರುತ್ತದೆ. ಮುದ್ದಣನು ಶ್ರೀರಾಮ ಪಟ್ಟಾಭಿಷೇಕ ಕಾವ್ಯವನ್ನು ಷಟ್ಪದಿ ಛಂದಸ್ಸಿನಲ್ಲಿ ರಚಿಸಿದರೆ ಶೇಷಗಿರಿರಾಯರು ಹಾಗೂ ಬಸವಪ್ಪ ಶಾಸ್ತ್ರಿಗಳು ಶಾಕುಂತಲ ನಾಟಕದ ಅನುವಾದವನ್ನು ವೃತ್ತ, ಕಂದ, ಷಟ್ಪದಿಗಳಲ್ಲಿ ಮಾಡಿದ್ದಾರೆ. ಇಂಥ ಛಂದೋನಿಯಮಗಳಿಗೆ ಕಟ್ಟು ಬಿದ್ದು ಹಲವೆಡೆ ಅನವಶ್ಯಕ ಪದಗಳನ್ನೂ, ಅನರ್ಥ ಕಲ್ಪಿಸುವ, ಮೂಲ ಆಶಯವನ್ನೆ ತಿರುಚುವಂಥ ಸಂದಿಗ್ಧತೆಗಳಿಗೆ ಎಡೆ ಮಾಡಿಕೊಟ್ಟಿದ್ದಾರೆ.

ಎಸ್.ಜಿ.ನರಸಿಹಾಚಾರ್ಯರು ರಚಿಸಿರುವ ಒಂದು ಷಟ್ಪದಿಯಲ್ಲಿ ಲಾಲಿತ್ಯ, ಸರಳತೆಗಳಿದ್ದರೂ ಕೆಲವು ಸಂದಿಗ್ಧತೆಗಳನ್ನು ಕಾಣಬಹುದು.

"ಸೂತಿಕಾಗೃಹದಲಿ ಸೊಡರಿನ

ಜ್ಯೋತಿ ಯಿರುಳಿನ ಕಾಲದಲ್ಲಿ ಪ್ರ

ಖ್ಯಾತವಾದಾ ರಾಜಪುತ್ರನ ಕಾಂತಿಯಿಂದಡಗಿ

ಸೋತು ಸೂರ್‍ಯನ ತೇಜದಿಂಖ

ದ್ಯೋತ ಭೂತಲದಲ್ಲಿ ಬೆಳಗುವ

ರೀತಿಯಿಂದ ನಿಸ್ತೇಜವಾಗಿಹುದೇನು ಪೇಳುವೆನು"[೧೧]

ಇಲ್ಲಿ ಕವಿಯು ಪ್ರಾಸ ಹಾಗೂ ಷಟ್ಪದಿ ಛಂದೋನಿಯಮಕ್ಕೆ ಒಳಪಟ್ಟು ಪದಗಳ ಜೋಡಣೆಗೆ ಹೆಣಗಾಡಿರುವಂತೆ ಕಾಣುತ್ತದೆ.

ಎಂ.ಗೋವಿಂದ ಪೈ ಅವರು ಪ್ರಾಸತ್ಯಾಗ ಮಾಡಿದ ಪ್ರಸಂಗವು ದೊಡ್ಡ ವಿವಾದಕ್ಕೆ ಎಡೆಮಾಡಿಕೊಟ್ಟರೂ ತಮ್ಮ ನಿಲುವಿಗೆ ಬದ್ಧರಾಗಿ ಅವರು ಗಟ್ಟಿ ನಿರ್ಧಾರ ಕೈಗೊಂಡರು. "೧೯೦೩ ರಿಂದ ೧೯೧೧ರ ವರೆಗೆ ನಾನು ಪ್ರಾಸವನ್ನೂ ಇಟ್ಟೂ ಬಿಟ್ಟೂ ಬರೆಯುತ್ತಿದ್ದೆ. ೧೯೧೧ನೆಯ ಏಪ್ರಿಲ್ ತಿಂಗಳಲ್ಲಿ ನಾನು ಸುಮಾರು ಒಂದು ತಿಂಗಳು ಬರೋಡಾ ರಾಜ್ಯದ ನವಸಾರಿ ಎಂಬಲ್ಲಿದ್ದೆ. ಆಗ್ಗೆ ಒಂದು ಮುಂಜಾನೆ ಮಾಳಿಗೆಯಲ್ಲಿ ಶತಪಥಗೆಯ್ಯುತ್ತಿದ್ದಾಗ ಹಠಾತ್ತಾಗಿ ಆಗೋದು ಹೋಗೋದು ದೇವರ ಇಚ್ಛೆ, ಹೂಡೋದು ಬಿತ್ತೋದು ನನ್ನ ಇಚ್ಛೆ, ಇನ್ನು ಮೀನ ಮೇಷ ನೋಡದೆ ಪ್ರಾಸವನೀಗಲೇ ತೊರೆದು ಬಿಡುವುದೇ ನಿಶ್ಚಯಂ ಎಂದಾಯಿತು" ಎಂದು ಅವರೇ ಹೇಳಿದ್ದಾರೆ. ಇಲ್ಲಿ ಗಮನಿಸಬೇಕಾದುದು ಪೈ ಅವರ ದಿಟ್ಟತನವನ್ನು. ಎಲ್ಲರೂ ಪೈ ಅವರು ಹೆಜ್ಜೆ ಹಾಕಿದ ಬಗ್ಗೆ ವ್ಯಂಗ್ಯವಾಡುತ್ತಿದ್ದ ಸಂದರ್ಭದಲ್ಲಿ ನಾನು ನಿರ್ಮಿಸಿದ ಮೇಕೆ ಹಾದಿಯೇ ಮುಂದೆ ತೇರು ಎಳೆಯುವ ದೊಡ್ಡ ಹಾದಿಯಾಗುತ್ತದೆ ಎಂದು ಪ್ರತಿಕ್ರಿಯಿಸಿದರು. ಅವರು ಹಾಕಿಕೊಟ್ಟ ಛಂದೋಸ್ವಾತಂತ್ರ್ಯವು ಮುಂದಿನ ತಲೆಮಾರಿನ ಕವಿಗಳಿಗೆ ತೋರುಬೆರಳಾಗಿ ಪರಿಣಮಿಸಿತು

ಪೈ ಅವರ ನಂತರ ಬಿ.ಎಂ.ಶ್ರೀಯವರು ಇಂಗ್ಲಿಷ್ ಗೀತೆಗಳು ಕವನ ಸಂಕಲನದಲ್ಲಿ ಹಲವು ಹೊಸ ಹುಟ್ಟುಗಳಿಗೆ ಕಾರಣಕರ್ತರಾದರು. "ಇಂಗ್ಲಿಷ್ ಗೀತೆಗಳಲ್ಲಿ" ಛಂದಸ್ಸಿನ ಹೊಸದೊಂದು ಹೆದ್ದಾರಿಯನ್ನೆ ತೆರೆದದ್ದು ಕನ್ನಡ ಕಾವ್ಯದ ಚರಿತ್ರೆಯಲ್ಲಿ ಅವರ ಹೆಸರು ಚಿರಸ್ಮರಣೀಯವಾಗಿ ನಿಲ್ಲುವುದು ಮುಖ್ಯವಾಗಿ ಇದರಿಂದ. ಹಳಗನ್ನಡದ ಕಾಲಕ್ಕಾಗಲೆ ಸಂಸ್ಕೃತದ ಶಾರ್ದೂಲ ವಿಕ್ರೀಡಿತ ಮೊದಲಾದ ವೃತ್ತಗಳೂ, ಪ್ರಾಕೃತದ ಕಂದವೂ ಕಾವ್ಯದಲ್ಲಿ ಮನೆ ಮಾಡಿಕೊಂಡು ಕನ್ನಡ ಛಂದಸ್ಸೆಂದರೆ ಇವೇ ಎನ್ನುವಂತೆ ಆಗಿದ್ದವು. ಇವುಗಳೆಲ್ಲವು ಕನ್ನಡದ ಜಾಯಮಾನಕ್ಕೆ ಕಠಿಣ ಹಾದಿಯೆನಿದವು. ಮುಂದೆ ದೇಸೀ ಮಟ್ಟಿನಲ್ಲಿ ಷಟ್ಪದಿಗಳು ರೂಪುಗೊಂಡು ನಂತರ ಅವೂ ಮಾರ್ಗೀಯ ಪರಂಪರೆಯತ್ತ ಸಾಗಿದವು. ದ್ರಾವಿಡ ಛಂದಸ್ಸೊಂದು ಕನ್ನಡದಲ್ಲಿ ಗಟ್ಟಿಯಾಗಿ ನೆಲೆಗೊಂಡಿತು. "ಕನ್ನಡ ನುಡಿಯ ಜಾಯಮಾನಕ್ಕೆ ರಗಳೆ,

ಷಟ್ಪದಿಗಳ ಕಾಲದಿಂದಲೂ ಒಗ್ಗಿ ಹದವಾಗಿ ಪಳಗಿರುವ ಮಾತ್ರಾಗಣಗಳನ್ನೆ ಇಟ್ಟಿಗೆಯಾಗಿ ಉಪಯೋಗಿಸಿ ಚರಣವಿನ್ಯಾಸ ಪ್ರಾಸ ವಿಲಾಸಗಳನ್ನು ಮಾತ್ರ ಬಗೆಬಗೆಯಾಗಿ ಏರ್ಪಡಿಸಿ ಹೊಸ ಹೊಸ ಕಟ್ಟಡಗಳನ್ನು ಕಟ್ಟುವುದು ಸಾಧ್ಯ, ಉಚಿತ ಎಂಬುದು ಪಾಂಡಿತ್ಯದಿಂದ ಪರಿಪಕ್ವವಾದ ಶ್ರೀಯವರ ಸ್ವತಂತ್ರ ದೃಷ್ಟಿಗೆ ಹೊಳೆಯಿತು"[9] ಶ್ರೀಯವರು ಇಂಗ್ಲಿಷ್ ಸೇರಿದಂತೆ ಹಲವು ಭಾಷೆಗೆ ಸಂಬಂಧಿಸಿದ ಛಂದಸ್ಸುಗಳನ್ನು ಆಳವಾಗಿ ಅಧ್ಯಯನ ಮಾಡಿದ್ದವರು.

"ಇಂಗ್ಲಿಷ್ ಗೀತೆಗಳ"ಲ್ಲಿ ಭಾಷೆ, ಶೈಲಿ, ಛಂದಸ್ಸು, ವಸ್ತು ಎಲ್ಲದರಲ್ಲಿಯೂ ಹೊಸತನವನ್ನು ಶೋಧಿಸಿದ ಶ್ರೀಯವರು ಕನ್ನಡ ಕಾವ್ಯದ ಮಟ್ಟಿಗೆ ಅಮೂಲ್ಯ ಕೊಡುಗೆ ನೀಡಿದರು. ಹಲವು ದೇಸೀ ಮಟ್ಟುಗಳ ಸೃಷ್ಟಿಗೂ ಕಾರಣರಾದ ಅವರು ಇಂಗ್ಲಿಷ್ ಛಂದೋರೂಪಗಳಿಗೆ ಕನ್ನಡದ ಹೊದಿಕೆ ಹೊದಿಸಿ ಕನ್ನಡೀಕರಿಸಿದರು. ಕವಿಯಾದವನಿಗೆ ಸ್ವತಂತ್ರವಾಗಿ ಕಾವ್ಯರಚಿಸುವ, ನಿಬಂಧನೆಗಳಿಂದ ಮುಕ್ತವಾಗಿ ಅಭಿವ್ಯಕ್ತಿಸುವ ಹೆದ್ದಾರಿಯನ್ನು ನಿರ್ಮಿಸಿಕೊಟ್ಟರು ಇವರು ನಿರ್ಮಿಸಿಕೊಟ್ಟ ಹಾದಿಯಲ್ಲಿ ಮುಂದೆ ಕುವೆಂಪು, ಬೇಂದ್ರೆ, ಪು.ತಿ.ನ., ಮಾಸ್ತಿ, ಗೋಕಾಕ್ ಮುಂತಾದವರು ಹುಲುಸಾದ ಫಸಲನ್ನು ತೆಗೆದರು. ಹೀಗೆ ಕನ್ನಡ ಕಾವ್ಯ ಪರಂಪರೆಗೆ ಹೊಸ ಗನ್ನಡದ ಆರಂಭಕಾರರು ಮಹತ್ವದ ಮೈಲಿಗಲ್ಲುಗಳನ್ನು ನಿರ್ಮಿಸಿಕೊಟ್ಟಿದ್ದಾರೆ. ಪಂಜೆ ಮಂಗೇಶರಾಯರು ಎಸ್.ಜಿ.ನರಸಿಂಹಾಚಾರ್ಯರು, ಪೈ ಅವರು, ಮುಂತಾದವರ ಪ್ರಯತ್ನಗಳೂ ಹೊಸತನಕ್ಕೆ ಕಾರಣೀಭೂತವಾಗಿವೆ. ಅದರಲ್ಲೂ ಛಂದಸ್ಸಿನ ವಿಚಾರದಲ್ಲಿ ಗೋವಿಂದ ಪೈ ಹಾಗೂ ಬಿ.ಎಂ.ಶ್ರೀ ಯವರು ಕಾವ್ಯರಥದ ಎರಡು ಗಾಲಿಗಳೇ ಆಗಿ ಭದ್ರ ತಳಹದಿ ಒದಗಿಸಿದ್ದಾರೆ.



## ಅಡಿಟಿಪ್ಪಣಿ

೧. ತ.ಸು.ಶಾಮರಾಯ, ಕನ್ನಡ ಸಾಹಿತ್ಯಚರಿತ್ರೆ, ಪು ೨೨೫.

೨. ಅದೇ, ಪುಟ ೨೨೬.

೩. ಎಸ್.ಅನಂತನಾರಾಯಣ, ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ಪುಟ-೩೨.

೪. ಅದೇ, ಪುಟ ೭೦ ಮತ್ತು ೭೧.

೫. ಎಂ.ಚಿದಾನಂದ ಮೂರ್ತಿ, ಭಾಷಾ ವಿಜ್ಞಾನದ ಮೂಲತತ್ವಗಳು, ಪುಟ ೯೭.

೬. ಸಂ.ಗಿರಡ್ಡಿ ಗೋವಿಂದರಾಜು, ಕನ್ನಡ ನವೋದಯ ಕಾವ್ಯ; ಮಂಗಳೂರು ಕೇಂದ್ರ, ಪುಟ ೧೬.

ಲೇ. ಬೈರಮಂಗಲ ರಾಮೇಗೌಡ, ಮುದ್ದಣ ಮತ್ತು ಕನ್ನಡ ನವೋದಯ ಕಾವ್ಯ,

೭. ಅದೇ, ಪುಟ ೩೪.

ಲೇ.ವಿ.ಎನ್.ಹೆಗಡೆ, ಹಟ್ಟಿಯಂಗಡಿ ನಾರಾಯಣರಾಯರ ಆಂಗ್ಲಕವಿತಾವಳಿ

೮. ಅದೇ, ಪುಟ ೫೯.

ಲೇ.ಸಿ.ಟಿ.ಪ್ರಭುಸ್ವಾಮಿ ಮಠ, ಪಂಜೆ ಮಂಗೇಶರಾಯರ ಕಾವ್ಯ.

೯. ಡಾ.ಎಡ್ವರ್ಡ್ ನೊರೋನ, ಕನ್ನಡ ಧಾರ್ಮಿಕ ಸಾಹಿತ್ಯಕ್ಕೆ ಕ್ರೈಸ್ತ ಮಿಷನರಿಗಳ ಕೊಡುಗೆ,

ಪುಟ ೨೫೩.

೧೦. ಜಿ.ಎಸ್.ಶಿವರುದ್ರಪ್ಪ, ಸೌಂದರ್ಯ ಸಮೀಕ್ಷೆ, ಪುಟ ೨೩೧ ಮತ್ತು ೨೩೨.

೧೧. ಪ್ರೊ.ಎಸ್.ಅನಂತನಾರಾಯಣ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್, ಕಾವ್ಯದ ಪ್ರಭಾವ, ಪುಟ ೪೮.

೧೨. ಬಿ.ಎಂ.ಶ್ರೀ., ಇಂಗ್ಲಿಷ್ ಗೀತೆಗಳು, ಪ್ರಸ್ತಾವನೆ, ಪುಟ xix.

೧೩. ಅದೇ, ಪುಟ xxvii.

೧೪. ಅದೇ, ಪುಟ xiii.

## ಹೊಸಗನ್ನಡ ಕಾವ್ಯಾರಂಭದ ಒಟ್ಟುನೋಟ

ಹತ್ತೊಂಬತ್ತನೆಯ ಶತಮಾನಾ ಉತ್ತರಾರ್ಧ ಹಾಗೂ ಇಪ್ಪತ್ತನೇ ಶತಮಾನವು ಕನ್ನಡ ನಾಡಿನ ಭಾಷೆ, ಸಾಹಿತ್ಯ ಹಾಗೂ ಸಂಸ್ಕೃತಿಯ ದೃಷ್ಟಿಯಿಂದ ಸುವರ್ಣಯುಗ. ಎಲ್ಲದರಲ್ಲಿಯೂ ಹೊಸತನದ ಮುಂಬೆಳಗು ಮೂಡುವ ಸೂಚನೆಗಳು ಕಂಡುಬರುವ ಕಾಲ, ಪಾಶ್ಚಾತ್ಯ ಶಿಕ್ಷಣಪದ್ಧತಿ, ಐರೋಪ್ಯ ವಿಚಾರಧಾರೆಗಳ ಸಂಪರ್ಕ, ಇಂಗ್ಲಿಷ್ ಭಾಷೆಯ ಮೂಲಕ ಗ್ರೀಕ್, ಲ್ಯಾಟಿನ್, ಫ್ರೇಂಚ್, ಜರ್ಮನ್, ಇಟಾಲಿಯನ್, ರಷ್ಯನ್ ಸಾಹಿತ್ಯದ ಪರಿಚಯ, ಸುವ್ಯವಸ್ಥಿತ, ಸುಭದ್ರ ಬ್ರಿಟಿಷ್ ಆಡಳಿತ, ರಾಷ್ಟ್ರೀಯ ಪುನರುತ್ಥಾನದ ಅಬ್ಬರ, ಯಂತ್ರೋಪಕರಣಗಳ ಆಗಮನ, ಕ್ರೈಸ್ತಮಿಷನರಿಗಳ ಅವಿರತ ಪರಿಶ್ರಮ ಮುಂತಾದ ಅಂಶಗಳು ಭಾರತದಲ್ಲಿ ಉಂಟು ಮಾಡಿದ ಪಲ್ಲಟಗಳಿಂದಾಗಿ ಕರುನಾಡಿನಲ್ಲಿ ಬದಲಾವಣೆಯ ಗಾಳಿ ವೇಗವಾಗಿ ಬೀಸಿತು. ಮೈಸೂರು ಒಡೆಯರು ಸೇರಿದಂತೆ ಹಲವು ದೇಸೀಯ ಸಂಸ್ಥಾನಗಳು ಶಿಕ್ಷಣ, ಸಾಹಿತ್ಯ ಹಾಗೂ ಸಂಸ್ಕೃತಿಯ ಪೋಷಣೆಗೆ ಒತ್ತಾಸೆಯಾಗಿ ನಿಂತವು. ದೇಸೀಯ ಭಾಷೆಯಲ್ಲಿ ಸಾಹಿತ್ಯ, ಶಿಕ್ಷಣ ಹಾಗೂ ಸಾಂಸ್ಕೃತಿಕ ವಿಚಾರಧಾರೆಗಳು ಸಾಮಾನ್ಯ ಜನರಿಗೂ ಕೈಗೆಟಕುವಂತಾಯಿತು. ಕನ್ನಡ ಸಾಹಿತ್ಯಕ್ಕೆ ಪ್ರೇರಕ ಹಾಗೂ ಪೋಷಕವಾಗಿದ್ದ ಸಂಸ್ಕೃತದ ಸ್ಥಾನದಲ್ಲಿ ಇಂಗ್ಲಿಷ್ ಸಾಹಿತ್ಯವು ರಾರಾಜಿಸಿತು. ಸಂಸ್ಕೃತದ ಬೀಜವು ಮೊಳೆತು, ಬೆಳೆದು ಕನ್ನಡದಲ್ಲಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಂತೆ ದ್ರಾವಿಡ ಸತ್ವವನ್ನುಳಿಸಿಕೊಂಡು ಕನ್ನಡ ಸಾಹಿತ್ಯವು ಇಂಗ್ಲಿಷ್‌ನ ಸಾರವನ್ನು ಹೀರಿಕೊಂಡು ಸ್ವತಂತ್ರ ವೈಲಕ್ಷಣಗಳೊಡನೆ ವಿಕಾಸವಾಯಿತು. ಕನ್ನಡದ ಬೇರಿಗೆ ಸಂಸ್ಕೃತದ ನೀರು, ಇಂಗ್ಲಿಷ್‌ನ ಗೊಬ್ಬರ, ದ್ರಾವಿಡದ ರಕ್ಷಾಗೋಡೆ ಇವು ಮುಪ್ಪುರಿಗೊಂಡು ಸಮೃದ್ಧ ಕನ್ನಡ ಸಾಹಿತ್ಯವು ಹೆಜ್ಜಾಲದಂತೆ ತಲೆ ಎತ್ತಿತು.

ಇಂಗ್ಲಿಷ್ ಭಾಷೆ ಹಾಗೂ ಸಾಹಿತ್ಯದ ಸ್ಪರ್ಶ ಪಡೆದ ಕನ್ನಡದಲ್ಲಿ ಮತೀಯತೆ, ಚರ್ವಿತಚರ್ವಣ ಕಾವ್ಯಪರಂಪರೆ, ಕವಿಸಮಯದ ಅತಿರೇಕಗಳು, ಸಂಸ್ಕೃತ ಪದಗುಚ್ಛಗಳ ಆಡಂಬರ, ಅಷ್ಟಾದಶ ವರ್ಣನೆಯ ಅಬ್ಬರಗಳು ಕಣ್ಮರೆಯಾಗತೊಡಗಿದವು. ಅಪ್ಪಟ ದೇಸೀ ಛಂದೋ ಪ್ರಕಾರಗಳು, ಜನ ಸಾಮಾನ್ಯರ ಸಾಹಿತ್ಯವೆಂದೇ ಬಿಂಬಿಸಲ್ಪಟ್ಟ ವಚನ, ಕೀರ್ತನೆ, ತ್ರಿಪದಿ, ಸಾಂಗತ್ಯಗಳು ಹೊಸ ಸ್ವರೂಪದಲ್ಲಿ ಮೈದಾಳಿದವು. ಕವಿಯು ಶಬ್ದಚಮತ್ಕಾರದ ವ್ಯಾಮೋಹವನ್ನು ತ್ಯಜಿಸಿ ಸಮಕಾಲೀನ ಸಮಾಜದ ಆಗುಹೋಗುಗಳತ್ತ ತನ್ನ ಚಿತ್ತವನ್ನು ಹರಿಸಬೇಕಾಯಿತು. ಸಾಹಿತ್ಯವು ಸಮಾಜದ ಸ್ಥಿತಿಗತಿಯ ಫಲಶ್ರುತಿ, ಸಮಾಜದ ಚಿತ್ತಸ್ವಾಸ್ಥ್ಯವನ್ನು ಕಾಪಾಡುವ ಕಾವಲುಗಾರ, ಪಟ್ಟಭದ್ರ ಪರಂಪರೆಯನ್ನು ಪಲ್ಲಟಗೊಳಿಸಲು ಇರುವ ಬ್ರಹ್ಮಾಸ್ತ್ರ ಎಂಬುದನ್ನು ಕವಿಯು ತನ್ನ ಅಭಿವ್ಯಕ್ತಿಯ ಮೂಲಕ ತೋರಿಸಿಕೊಟ್ಟನು. ನಾಡು ನುಡಿಯ ಉಳಿವಿಗಾಗಿ ಕವಿಯು ಲೇಖನಿಯ ಖಡ್ಗವನ್ನು ಕೈಗೆತ್ತಿಕೊಂಡನು.

ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ

ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ

ರಾಜನುಡಿಯೆಂದೊಂದು, ರಾಷ್ಟ್ರನುಡಿಯೆಂದೊಂದು,

ದೇವನುಡಿಯೆಂದೊಂದು ಹತ್ತಿ ಜಗ್ಗಿ

ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ,

ಕನ್ನಡೆಮ್ಮನ ಬೆನ್ನು ಬಳುಕಿ ಬಾ ಬಗ್ಗಿ

ಕೂಗಿಕೊಳ್ಳಲು ಕೂಡ ಬಲವಿಲ್ಲ ಮಕ್ಕಳೇ

ಬಾಯ್ಮುಚ್ಚಿ ಹಿಡಿದಿಹರು ಕೆಲರು ನುಗ್ಗಿ

ಕುವೆಂಪು ಅವರ ಮೇಲಿನ ಕವಿತೆಯ ಸಾಲುಗಳಲ್ಲಿ ಕಂಡುಬರುವ ತಾಯ್ನುಡಿಯ ಅಭಿಮಾನವು ಶಾಂತಕವಿಗಳ, ಗೋವಿಂದ ಪೈ ಅವರ ಕವಿತೆಗಳಿಂದ ಪ್ರಭಾವಿತವಾಗಿರುವಂತೆ ಕಂಡುಬರುತ್ತದೆ. ನಾಡಿನ ಜನರು ಮಾತೃಭಾಷೆಯ ಬಗ್ಗೆ ನಿರ್ಲಕ್ಷ್ಯ ತಾಳುತ್ತಿದ್ದ ಸಂದರ್ಭದಲ್ಲಿ ಮೇಲಿನ ಪದ್ಯವು ಜನರನ್ನು ಜಾಗೃತರನ್ನಾಗಿಸುವಲ್ಲಿ ಯಶಸ್ವಿಯಾಗಿದೆ. ನವೋದಯ ಪರಂಪರೆಯ ಕವಿಗಳಲ್ಲಿ ಇಂಥ ಜನಭಾಷೆಯ ಕವಿತೆ ಉದಯಿಸಲು ಆರಂಭಿಕ ಕವಿಗಳು ಕಾವ್ಯಭೂಮಿಯ ತೊಡಕುಗಳನ್ನು ದೂರಸರಿಸಿ ಹಸನುಗೊಳಿಸಿದ್ದರು ಎಂಬ ಅಂಶ ವಿವೇಚನಾರ್ಹ.

ಮುದ್ರಣನಿಂದ ಆರಂಭಗೊಂಡ ಹೊಸತನದ ಹೊಳಹುಗಳು ನಿರಂತರವಾಗಿ ಚಲಿಸತೊಡಗಿದವು. ಮೈಸೂರಿನ ಒಡೆಯರ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯದ ಬಗ್ಗೆ ಇಟ್ಟುಕೊಂಡಿದ್ದ ಅಪಾರ ಕಾಳಜಿಯಿಂದಾಗಿ ಭಾಷೆಯು ಸರಳಗೊಂಡು, ಸಾಹಿತ್ಯ ನಿರ್ಮಾಣಗೊಂಡು ಜನರ ಬಳಿ ಬರಲು ಸಾಧ್ಯವಾಯಿತು. ಸಂಸ್ಕೃತದ ಕಾಳಿದಾಸನ ನಾಟಕಗಳು ಕನ್ನಡಕ್ಕೆ ಬಂದು ರಂಗಭೂಮಿಯ ಮೇಲೆ ಪ್ರದರ್ಶನಗೊಳ್ಳತೊಡಗಿದವು. ಕ್ರೈಸ್ತಗೀತೆಗಳು ಅಪ್ಪಟ ದೇಸೀ ಮಟ್ಟುಗಳಲ್ಲಿ ರಚನೆಯಾಗಿ ಸಾಮಾನ್ಯ ಜನರ ನಾಲಿಗೆಯ ಮೇಲೆ ನಲಿದಾಡಿದವು. ಷೇಕ್ಸ್‌ಪಿಯರ್‌ನ ಬಹುಪಾಲು ನಾಟಕಗಳು ಕನ್ನಡಕ್ಕೆ ಭಾಷಾಂತರಗೊಂಡು ಕನ್ನಡ ನಾಟಕೋದ್ಯಮಕ್ಕೆ ಹೊಸ ಹೊಳಪನ್ನು ನೀಡಿದವು. ಇಂಗ್ಲಿಷ್‌ನ ಪ್ರಮುಖ ಕವಿಗಳ ಕವಿತೆಗಳು, ಭಾವಗೀತೆಗಳು ಕನ್ನಡಕ್ಕೆ ಭಾಷಾಂತರಗೊಂಡು ಕನ್ನಡತನವನ್ನು ಮೈದುಂಬಿಕೊಡು ಹೊಸ ಬೆಳವಣಿಗೆಗೆ ನಾಂದಿ ಹಾಡಿದವು. ದೈವವನ್ನು ಕುರಿತು ಕಾವ್ಯರಚಿಸುತ್ತಿದ್ದ ಕವಿಕುಲವು ಪ್ರಕೃತಿ, ಮನುಷ್ಯ ಸಂಬಂಧಗಳು, ಸಮಾಜ ಹಾಗೂ ಸಾಂಸ್ಕೃತಿಕ ಆಯಾಮಗಳತ್ತ ಹೊರಳಿ ಕವಿತೆ ರಚಿಸತೊಡಗಿತು. ಕವಿಯು ತಾನು ಲೋಕವನ್ನು ಗ್ರಹಿಸಿದ, ಧ್ಯಾನಿಸಿದ, ಪರಿಪಕ್ವಗೊಂಡ, ಕವಿತೆಗಳನ್ನು ತನ್ನದೇ ಆದ ರೀತಿಯಲ್ಲಿ ನಿರ್ವಚಿಸತೊಡಗಿದನು. ಕಾವ್ಯದ 'ಲೋಕಾವಲಂಬನ' ಮತ್ತು ಲೀಲಾಗುಣಗಳನ್ನು ನಿಧಾನವಾಗಿ ಗ್ರಹಿಸುವತ್ತ ಕವಿ ಗಮನ ಹರಿಸಿದನು.

'ಹೊಸಗನ್ನಡ ಕಾವ್ಯದ ಮೊದಲ ಹೆಜ್ಜೆಗಳು' ಶೀರ್ಷಿಕೆಯ ಅಡಿಯಲ್ಲಿ ನವೋದಯಪೂರ್ವ ಕನ್ನಡ ಕಾವ್ಯವನ್ನು ಪರಿಶೀಲಿಸಿದಾಗ ಅಧ್ಯಯನದ ವಿವಿಧ ಹಂತಗಳಲ್ಲಿ ಹಲವು ಸಮರ್ಥನೀಯ ಮೌಲ್ಯಗಳು ಅನಾವರಣಗೊಳ್ಳುತ್ತವೆ. ಒಂದು ಕಾವ್ಯದ ಬಾಹ್ಯ ಸ್ವರೂಪವನ್ನು ಭಾಷೆ, ಅಲಂಕಾರ, ಛಂದಸ್ಸುಗಳು

ನಿರ್ಧರಿಸಿದರೆ, ಕವಿಯ ಮನೋಭೂಮಿಕೆ, ಆಶಯ, ಅನುಭವಗಳು ಅಂತಃಸ್ವರೂಪವನ್ನು ನಿರ್ಧರಿಸುತ್ತವೆ. ಇದಕ್ಕೆ ಬಾಹ್ಯ ಮತ್ತು ಆಂತರಿಕ ಪ್ರೇರಣೆ ಹಾಗೂ ಪ್ರಭಾವಗಳು ನಿರ್ಧಾರಕ ಅಂಶಗಳಾಗುತ್ತವೆ. ಪ್ರಸ್ತುತ ಸಂಶೋಧನೆಯಲ್ಲಿ ಇಂಥ ಅಂಶಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಮೂಲಕ ಕನ್ನಡದಲ್ಲಿ ಹೊಸ ಕಾವ್ಯ ಪರಂಪರೆಗೆ ಅಭಿಪ್ರೇರಣೆಗಳನ್ನು ಮೌಲ್ಯಯುತವಾಗಿ ವಿವೇಚಿಸಲಾಗಿದೆ.

ಕಾವ್ಯಪ್ರಕಾರಗಳು ಕವಿಗಳ ಮೇಲೆ ನಿರ್ಣಾಯಕ ಪ್ರಭಾವ ಬೀರಿದ್ದು ಸಂಸ್ಕೃತ, ಇಂಗ್ಲಿಷ್ ಹಾಗೂ ದ್ರಾವಿಡ ಭಾಷೆಯ ಕಾವ್ಯಪ್ರಕಾರಗಳು ಕನ್ನಡ ಕವಿಗಳಿಗೆ ದಾರಿದೀಪವಾಗಿದ್ದು, ಅವುಗಳ ಮೂಲ ಹಾಗೂ ಪರಿಷ್ಕೃತ ರೂಪಗಳು, ಜಾನಪದ ಶೈಲಿಯ ದೇಸೀ ಮಟ್ಟುಗಳು ಕವಿತೆಯ ರಚನೆಗೆ ಪರಿಕರಗಳಾಗಿ ಒದಗಿ ಬಂದಿವೆ. ಶಾಂತಕವಿ, ಶೇಷಗಿರಿರಾಯ, ಬಸವಪ್ಪಶಾಸ್ತ್ರಿ, ಎಸ್.ಜಿ.ನರಸಿಂಹಾಚಾರ್ ಮುಂತಾದವರು ಇಂಥ ಪ್ರಕಾರಗಳ ಮೊರೆ ಹೋಗಿ ಕನ್ನಡದ ಕಾವ್ಯವನ್ನು ಸತ್ವಪೂರ್ಣವಾಗಿ ಕಟ್ಟಿದ್ದಾರೆ. ರೂಪ, ಭಾಷೆ, ಛಂದಸ್ಸು,ವಸ್ತು ಶೈಲಿಗಳಲ್ಲಿ ಬದಲಾವಣೆಯನ್ನು ಬಯಸಿ ಹೊಸ ಹಾದಿಗೆ ನಾಂದಿ ಹಾಡಿದ ಗೋವಿಂದ ಪೈ, ಪಂಜೆ ಮಂಗೇಶರಾಯ, ಬಿ.ಎಂ.ಶ್ರೀ ಮುಂತಾದವರು ಹೆದ್ದಾರಿಗಳನ್ನು ನಿರ್ಮಿಸಿಕೊಟ್ಟರು. ನವೋದಯ ಹಾಗೂ ನವೋದಯೋತ್ತರ ಕವಿಗಳ ಪಾಲಿಗೆ ಇವರು ಮಾರ್ಗದರ್ಶಕರಾಗಿ, ಗುರುವಾಗಿ, ಸ್ಥಾನ ಪಡೆದರು. ಮೌಲಿಕ ಸಾಹಿತ್ಯ ಪರಂಪರೆಯ ಉಗಮಕ್ಕೆ ಕಾರಣರಾದ ಹೊಸಗನ್ನಡ ಕಾವ್ಯದ ಆರಂಭಕಾರರು ನಿಜವಾಗಿಯೂ ಅಭಿವಂದಿತರು. ಒಟ್ಟಾರೆಯಾಗಿ ಇಂಥ ಅಧ್ಯಯನಗಳಿಂದಾಗಿ ಮೇರುಕವಿಗಳ ಮೌಲ್ಯನಿರ್ಣಯಗಳು ನಿರ್ಧಾರವಾಗುತ್ತವೆ. ಅಂದಿನ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಒತ್ತಡಗಳ ಅರಿವು ಓದುಗರಿಗಾಗುತ್ತದೆ. ಕಾವ್ಯದ ಪ್ರಸ್ತುತತೆ, ಬದಲಾಗಬೇಕಾದ ಧೋರಣೆಗಳು, ಸಮಕಾಲೀನ ಕವಿಗಳಿಗೆ ಅರ್ಥವಾಗುತ್ತದೆ. ಒಂದು ಪರಿಶುದ್ಧ ಕಾವ್ಯಪರಂಪರೆಯ ಹಿಂದಿರುವ ಪರಿಶ್ರಮವೂ ತಿಳಿಯುವುದರಿಂದ ಸಾಹಿತ್ಯಾಸಕ್ತನ ಧ್ಯೇಯಗಳು ಚಿರಂತನ ಮೌಲ್ಯಗಳತ್ತ ವಾಲುತ್ತವೆ. ಇಂಥ ವಾಲುವಿಕೆಯ ಫಲವೇ ಕುವೆಂಪು, ಬೇಂದ್ರೆ, ಮಾಸ್ತಿ, ಜಿ.ಎಸ್.ಎಸ್, ಕಣವಿ, ಪು.ತಿ.ನ., ಕೆ.ಎಸ್.ನ ಮುಂತಾದವರ ಕವಿತೆಗಳು.



## ಅಡಿಟಿಪ್ಪಣಿ

೧. ಸಂ.ಸಿ.ಪಿ.ಕೆ.- ಆಯ್ದ ಕುವೆಂಪು ಕವನಗಳು

# ಗ್ರಂಥಋಣ

೧. ಎಚ್.ಎಸ್.ರಾಘವೇಂದ್ರರಾವ್ - ಹಾಡೆ ಹಾದಿ ತೋರಿತು
ಪ್ರಕಾಶಕರು: ಕನ್ನಡಸಂಘ, ಕ್ರೈಸ್ಟ ಕಾಲೇಜ್, ಬೆಂಗಳೂರು
ವರ್ಷ : ೧೯೯೫

೨. ಪ್ರೊ.ಎಸ್.ಅನಂತನಾರಾಯಣ - ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ
ಪ್ರಕಾಶಕರು: ಡಿ.ವಿ.ಕೆ.ಮೂರ್ತಿ, ಮೈಸೂರು
ವರ್ಷ : ೨೦೦೦

೩. ಡಾ.ಶ್ರೀನಿವಾಸ ಹಾವನೂರು - ಹೊಸಗನ್ನಡ ಅರುಣೋದಯ, ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
ವರ್ಷ : ೨೦೦೦

೪. ಡಾ.ಎಡ್ವರ್ಡ್ ನರೋನ - ಕನ್ನಡ ಧಾರ್ಮಿಕ ಸಾಹಿತ್ಯಕ್ಕೆ ಕ್ರೈಸ್ತ ಮಿಷನರಿಗಳ ಕೊಡುಗೆ
ಪ್ರಕಾಶಕರು: ಭಾಗ್ಯವಾನ್ ಪ್ರಕಾಶನ, ಮೈಸೂರು
ವರ್ಷ : ೧೯೯೬

೫. ಡಾ.ದೊಡ್ಡರಂಗೇಗೌಡ - ಕನ್ನಡ ನವೋದಯ ಕಾವ್ಯ: ಒಂದು ಪುನರ್ ಅವಲೋಕನ
ಸುಮುಖ ಪ್ರಕಾಶನ, ವಿದ್ಯಾರಣ್ಯನಗರ, ಬೆಂಗಳೂರು
ವರ್ಷ : ೨೦೦೪

೬. ಸಂ.ಗಿರಡ್ಡಿ ಗೋವಿಂದರಾಜ - ಕನ್ನಡ ನವೋದಯ ಕಾವ್ಯ, ಮಂಗಳೂರು ಕೇಂದ್ರ
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
ವರ್ಷ : ೨೦೦೧

೭. ಜಿ.ಎಸ್.ಶಿವರುದ್ರಪ್ಪ - ಸೌಂದರ್ಯ ಸಮೀಕ್ಷೆ
ಕಾಮಧೇನು ಪ್ರಕಾಶನ, ಶೇಷಾದ್ರಿಪುರಂ, ಬೆಂಗಳೂರು
ವರ್ಷ : ೧೯೯೯

೮. ಬಿ.ಎಂ.ಶ್ರೀಕಂಠಯ್ಯ - ಇಂಗ್ಲಿಷ್ ಗೀತೆಗಳು
ವಿಶ್ವ ಕನ್ನಡ ಸಮ್ಮೇಳನ ಮಾಲೆ
ನೃಪತುಂಗ ರಸ್ತೆ, ಬೆಂಗಳೂರು
ವರ್ಷ : ೧೯೮೩

೯. ಎಂ.ಗೋವಿಂದ ಪೈ - ಗಿಳಿವಿಂಡು
ಕರ್ನಾಟಕ ಸಂಘ, ಸೆಂಟ್ರಲ್‌ಕಾಲೇಜು, ಬೆಂಗಳೂರು
ವರ್ಷ : ೧೯೩೩

೧೦. ಎಂ.ಗೋವಿಂದ ಪೈ - ಗೋಲ್ಗೊಥಾ ಮತ್ತು ವೈಶಾಖಿ
ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ
ನೃಪತುಂಗ ರಸ್ತೆ, ಬೆಂಗಳೂರು
ವರ್ಷ : ೧೯೮೨

೧೧. ಕೀರ್ತಿನಾಥ ಕುರ್ತುಕೋಟಿ - ಯುಗಧರ್ಮ ಮತ್ತು ಸಾಹಿತ್ಯ ದರ್ಶನ
ಮನೋಹರ ಗ್ರಂಥಮಾಲೆ, ಧಾರವಾಡ
ವರ್ಷ : ೨೦೦೨

೧೨. ಜಿ.ಎಸ್.ಸಿದ್ದಲಿಂಗಯ್ಯ
ಎಂ.ಎಚ್.ಕೃಷ್ಣಯ್ಯ - ಸಾಲುದೀಪಗಳು
ಕರ್ನಾಟಕ ಸಾಹಿತ್ಯ ಅಕಾಡೆಮಿ
ಜೆ.ಸಿ.ರಸ್ತೆ., ಬೆಂಗಳೂರು
ವರ್ಷ : ೨೦೦೧

೧೩. ತ.ಸು.ಶಾಮರಾಯ - ಕನ್ನಡ ಸಾಹಿತ್ಯ ಚರಿತ್ರೆ
ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
ಗೋಕುಲಂ, ಮೈಸೂರು
ವರ್ಷ : ೨೦೦೧

೧೪. ಆರ್.ನರಸಿಂಹಚಾರ್ - ಕರ್ನಾಟಕ ಕವಿಚರಿತೆ, ತೃತೀಯ ಸಂಪುಟ
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ
ಬೆಂಗಳೂರು
ವರ್ಷ : ೨೦೦೫

೧೫. ಜಿ.ಎಸ್.ಶಿವರುದ್ರಪ್ಪ - ಕನ್ನಡ ಸಾಹಿತ್ಯ ಸಮೀಕ್ಷೆ
ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ,ಮೈಸೂರು
ವರ್ಷ : ೨೦೦೭

೧೬. ಸಂ { ಡಾ.ಶಂಕರಮೊಕಾಶಿ ಪುಣೇಕರ, ಡಾ.ಸಿ.ಪಿ.ಕೆ. } - ಕನ್ನಡ ವಿಮರ್ಶೆ
ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ
ನೃಪತುಂಗ ರಸ್ತೆ, ಬೆಂಗಳೂರು
ವರ್ಷ : ೧೯೮೨

೧೭. ಡಾ.ವರದಾ ಶ್ರೀನಿವಾಸ - ಪಂಜೆಮಂಗೇಶರಾಯರ ಕೃತಿಗಳು- ಒಂದು ಅಧ್ಯಯನ
ಜ್ಞಾನೋದಯ ಪ್ರಕಾಶನ, ಬೆಂಗಳೂರು
ವರ್ಷ : ೨೦೦೧

೧೮.ರಂ.ಶ್ರೀ.ಮುಗಳಿ - ಕನ್ನಡ ಸಾಹಿತ್ಯ ಚರಿತ್ರೆ
ಗೀತಾಬುಕ್ ಹೌಸ್, ಮೈಸೂರು
ವರ್ಷ : ೨೦೦೨

೧೯. ಡಾ.ಹಾ.ಮಾ.ನಾಯಕ - ಬಿಡುಗಡೆ ಬಳ್ಳಿ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು
ವರ್ಷ : ೧೯೭೫

೨೦. ಎಲ್.ಎಸ್.ಶೇಷಗಿರಿರಾವ್ - ಹೊಸಗನ್ನಡ ಸಾಹಿತ್ಯ ಚರಿತ್ರೆ
ಅಂಕಿತ ಪುಸ್ತಕ, ಬೆಂಗಳೂರು
ವರ್ಷ : ೨೦೦೨

೨೧. ಬಿ.ಎಂ.ಶ್ರೀ. - ಅಶ್ವತ್ಥಾಮನ್
ಗೀತಾಬುಕ್ ಹೌಸ್, ಮೈಸೂರು
ವರ್ಷ : ೧೯೯೬

೨೨. ಡಾ.ಪ್ರಭುಶಂಕರ - ಕನ್ನಡದಲ್ಲಿ ಭಾವಗೀತೆ
ನಿವೇದಿತ ಪ್ರಕಾಶನ, ಮಾನಸಗಂಗೋತ್ರಿ ಕ್ವಾರ್ಟಸ್,
ಮೈಸೂರು
ವರ್ಷ : ೧೯೮೧

೨೩. ಧಾರವಾಡಕರ್.ರಾ.ಯ. - ಹೊಸಗನ್ನಡ ಸಾಹಿತ್ಯದ ಉದಯಕಾಲ
ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಣೆ, ಧಾರವಾಡ
ವರ್ಷ : ೧೯೬೫

೨೪. ಸಂ.ಸಿ.ಪಿ.ಕೆ. - ಆಯ್ದ ಕುವೆಂಪು ಕವನಗಳು
ಚೇತನ ಬುಕ್ ಹೌಸ್
ನಾರಾಯಣಶಾಸ್ತ್ರಿ ರಸ್ತೆ, ಮೈಸೂರು

೨೫. ಸಂ.ಬಿ.ಎಂ.ಶ್ರೀ. - ಕನ್ನಡ ಕೈಪಿಡಿ, ಸಂಪುಟ-೨, ಪ್ರಸಾರಾಂಗ,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
ವರ್ಷ : ೧೯೪೭

೨೬. ಎಂ.ಗೋವಿಂದ ಪೈ - ಹೃದಯರಂಗ
ಕಾವ್ಯಾಲಯ ಪ್ರಕಾಶಕರು, ಮೈಸೂರು
ವರ್ಷ : ೧೯೬೯

